KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಮಾರ್ಚ್ ೧೨, ೨೦೦೯ (ಫಾಲ್ಗುಣ ೨೧, ಶಕ ವರ್ಷ ೧೯೩೦) | ಸಂಚಿಕೆ ೧೧ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ತಾಂತ್ರಿಕ ಶಿಕ್ಷಣ ಇಲಾಖೆ**

**ಪ್ರಾಚಾರ್ಯರವರ ಕಾರ್ಯಾಲಯ, ವಿ ಐ ಎಸ್ ಎಸ್ ಜೆ ಸರ್ಕಾರಿ ಪಾಲಿಟೆಕ್ನಿಕ್, ಭದ್ರಾವತಿ**

**ಟೆಂಡರ್ ಪ್ರಕಟಣೆ**

**ನಂ:ವಿಸಪಾಭ/35/ರಿ/ಕ್ಯಾಂಟೀನ್/2001–02, ದಿನಾಂಕ: 17ನೇ ಫೆಬ್ರವರಿ 2009**

ವಿ ಐ ಎಸ್ ಎಸ್ ಜೆ ಸರ್ಕಾರಿ ಪಾಲಿಟೆಕ್ನಿಕ್, ಭದ್ರಾವತಿಯ ಆಡಳಿತ ಕಟ್ಟಡದ ಮುಂಭಾಗದಲ್ಲಿ ರಸ್ತೆಗೆ ಹೊಂದಿಕೊಂಡಿರುವ ಕ್ಯಾಂಟೀನ್ (12 x 15) ಕಟ್ಟಡವನ್ನು 02 ವರ್ಷದ ಅವಧಿಗೆ ಅತೀ ಹೆಚ್ಚು ಬಾಡಿಗೆ ಆಧಾರದ ಕ್ಯಾಂಟೀನ್ ನಡೆಸಲು ಬಯಸುವವರಿಂದ ಮೊಹರಾದ ಟೆಂಡರುಗಳನ್ನು ಆಹ್ವಾನಿಸಲಾಗಿದೆ.

ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಟೆಂಡರುದಾರರು ದಿನಾಂಕ: 25.05.09 ಅಪರಾಹ್ನ 3.00 ಗಂಟೆಯ ಒಳಗೆ ತಿಂಗಳ ಬಾಡಿಗೆ ಅಂಕಿ ಹಾಗೂ ಅಕ್ಷರಗಳಲ್ಲಿ ನಮೂದಿಸಿ ಸಹಿಯೊಂದಿಗೆ ಪ್ರಾಚಾರ್ಯರು, ವಿ ಐ ಎಸ್ ಎಸ್ ಜೆ ಸರ್ಕಾರಿ ಪಾಲಿಟೆಕ್ನಿಕ್, ಭದ್ರಾವತಿ ಇವರಿಗೆ ಸಲ್ಲಿಸತಕ್ಕದ್ದು.

**ಷರತ್ತುಗಳು:**

1) ಕ್ಯಾಂಟೀನ್ ನಡೆಸಲು ಟೆಂಡರ್ ಅಂಗೀಕರಿಸಿದ ಆದೇಶ ನೀಡಿದ ದಿನಾಂಕದಿಂದ 02 ವರ್ಷಗಳವರೆಗೆ ಕಾಲಾವಕಾಶವಿರುತ್ತದೆ.
2) ಅಂಗೀಕರಿಸಲ್ಪಟ್ಟ ಟೆಂಡರ್‌ದಾರರು ಆದೇಶ ಪಡೆದ ತಕ್ಷಣ ರೂ. 5000–00 ಠೇವಣಿ ಕಟ್ಟಿ ಕ್ಯಾಂಟೀನ್ ಸ್ವಾಧೀನ ಪಡೆಯತಕ್ಕದ್ದು.
3) ಕ್ಯಾಂಟೀನ್ ಒಳ ಹಾಗೂ ಹೊರ ಆವರಣ ಸ್ವಚ್ಛವಾಗಿ ಇಟ್ಟುಕೊಳ್ಳಬೇಕು.
4) ಪ್ರತಿ ತಿಂಗಳ ಮುಂದಿನ 10 ದಿನಗಳಲ್ಲಿ ಬಾಡಿಗೆ ನಗದು ವಿಭಾಗಕ್ಕೆ ಪಾವತಿಸಿ ರಶೀದಿ ಪಡೆಯತಕ್ಕದ್ದು.
5) ಟೆಂಡರ್‌ದಾರ ಒಪ್ಪುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.
6) ಪ್ರತಿ ತಿಂಗಳು ವಿದ್ಯುತ್ ಬಿಲ್ ಪ್ರತ್ಯೇಕವಾಗಿ ಪಾವತಿಸಬೇಕಾಗಿರುತ್ತದೆ.
7) ಮೇಲ್ಕಂಡ ಕ್ರಮ ಸಂಖ್ಯೆ 01 ರಿಂದ 05 ರ ನಿಯಮಗಳನ್ನು ಉಲ್ಲಂಘಿಸಿದಲ್ಲಿ ಕ್ಯಾಂಟೀನ್ ಟೆಂಡರ್ ರದ್ದುಪಡಿಸಲು ಅಧಿಕಾರವಿರುತ್ತದೆ.

ಪ್ರಾಚಾರ್ಯರು
ವಿ ಐ ಎಸ್ ಎಸ್ ಜೆ ಸರ್ಕಾರಿ ಪಾಲಿಟೆಕ್ನಿಕ್
ಭದ್ರಾವತಿ – 577 301.

ಪಿ.ಆರ್. 204

## ಜಲಸಂಪನ್ಮೂಲ ಇಲಾಖೆ
## ಕಾರ್ಯಪಾಲಕ ಅಭಿಯಂತರರವರ ಕಛೇರಿ, ಗುಣ ನಿಯಂತ್ರಣ ವಿಭಾಗ, ಮುನಿರಾಬಾದ

**ಸಂಖ್ಯೆ: ಕಾಪಾಇ/ಗುನಿವಿ/ಪಿಬಿ–2/ಟಿ.ಬಿ.ಪಿ ಆಧುನೀಕರಣ/ಥರ್ಡ್‌ಪಾರ್ಟಿ/ಟೆಂಡರ್/2008–09/784**

**ದಿನಾಂಕ: 19ನೇ ಫೆಬ್ರವರಿ 2009**

**ಪೂರ್ವಾರ್ಹತೆ (ಪ್ರೀ ಕ್ವಾಲಿಫಿಕೇಶನ್) ಕಮ್ ಅಲ್ಪಾವಧಿ ಟೆಂಡರ್ ಅಧಿಸೂಚನೆ**

ಮೊಹರಾದ ಟೆಂಡರ್‌ಗಳನ್ನು ಈ ಕೆಳಕಾಣಿಸಿರುವ ಕಾಮಗಾರಿಗಳಿಗೆ ಕರ್ನಾಟಕ ಪಾರದರ್ಶಕ ಅಧಿನಿಯಮ–ರಂತೆ ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯಪಾಲಕ ಅಭಿಯಂತರರವರು ಗುಣ ನಿಯಂತ್ರಣ ವಿಭಾಗ, ಮುನಿರಾಬಾದ ಜಿಲ್ಲೆ ಕೊಪ್ಪಳ ಇವರು 3ನೇ ಭಾಗೀದಾರ ಸಲಹೆಗಾರರಿಂದ ಸೇವೆ ಮತ್ತು ಕಾಮಗಾರಿಗಳ ಗುಣ ನಿಯಂತ್ರಣ ಪರೀಕ್ಷೆಗಳನ್ನು (Consultancy Services For Third Party Inspection And Quality Control Testing) ಕೈಗೊಳ್ಳಲು ಅರ್ಹ ಏಜೆನ್ಸಿದಾರರಿಂದ (Firms/ Organisations/ NGOs) ಇಲಾಖಾ ನಿಯಮವಳಿಗಳ ಮೇರೆಗೆ ದ್ವಿ ಪ್ರತಿಗಳಲ್ಲಿ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಮೊಹರಾದ ಲಕೋಟೆ ಮೇಲೆ ಕಾಮಗಾರಿ ಹೆಸರು ಮತ್ತು ಏಜೆನ್ಸಿಯವರ ಪೂರ್ಣ ಅಂಚೆ ವಿಳಾಸ ಮತ್ತು ವಿವರಗಳನ್ನು ನಮೂದಿಸತಕ್ಕದ್ದು:

**ಕಾಮಗಾರಿ ಹೆಸರು ಮತ್ತು ವಿವರಗಳು:**

| ಕ್ರ. ಸಂ | ಕಾಮಗಾರಿಯ ಹೆಸರು | ಟೆಂಡರ್ ಗಿಟ್ಟ ಮೊತ್ತ ಲಕ್ಷಗಳಲ್ಲಿ | ಇ.ಎಂ.ಡಿ ಮೊತ್ತ ರೂ. ಗಳಲ್ಲಿ | ಖಾಲಿ (ಪ್ರೀಕ್ವಾಲಿಫಿಕೇಶನ್ ಬಿಡ್ ಫಾರಂಗಾಗಿ ನಿಗದಿಪಡಿಸಿದ ಮೊತ್ತ ( ಪ್ರತಿ ಸೆಟ್‌ಗೆ) ಎಲ್ಲಾ ತೆರಿಗೆಗಳು ಸೇರಿ ರೂ ಗಳಲ್ಲಿ | ಖಾಲಿ ಟೆಂಡರ್ ಫಾರಂಗಾಗಿ ನಿಗದಿಪಡಿಸಿದ ಮೊತ್ತ (ಪ್ರತಿ ಸೆಟ್‌ಗೆ) ಎಲ್ಲಾ ತೆರಿಗೆಗಳು ಸೇರಿ ರೂ ಗಳಲ್ಲಿ | ಮುಗಿಸ ಬೇಕಾದ ಅವಧಿ |
|---|---|---|---|---|---|---|
| **ನಂ.2 ಕಾಲುವೆ ವಿಭಾಗ ವಡ್ಡರಹಟ್ಟಿ** | | | | | | |
| 1 | 3ನೇ ಭಾಗೀದಾರ ಸಲಹೆಗಾರ ರಿಂದ ಸೇವೆ ಮತ್ತು ಕಾಮಗಾರಿ ಗಳ ಗುಣ ನಿಯಂತ್ರಣ ಪರೀಕ್ಷೆ ಗಳನ್ನು ತುಂಗಭದ್ರಾ ಎಡದಂಡೆ ಮುಖ್ಯಕಾಲುವೆ ಕಿ.ಮೀ. 0.00 ದಿಂದ 38.00 ಅಡಿಯಲ್ಲಿ ಬರುವ ಹಾರ್ಡ್ ಪ್ಯಾಸೇಜ್, ರಸ್ತೆ ಅಭಿವೃದ್ಧಿ ಕಾಮಗಾರಿ ಹಾಗೂ ವಿತರಣ ಕಾಲುವೆ 1,2,3,6,7,8,9, 10,10ಎ, 11, 11ಎ, 13, 14, 15 ಹಾಗೂ 16 ರ ವಿವಿಧ ಭಾಗಗಳಲ್ಲಿ ಬರುವ ಕಾಲುವೆ ಅಭಿವೃದ್ಧಿ ಕಾಮಗಾರಿಗಳು.. ಒಟ್ಟು ಕಾಮಗಾರಿಗಳ ಮೊತ್ತ ರೂ. 425.00ಲಕ್ಷಗಳು | 12.50 | 19000 | 2000 | 11250 | 3 ತಿಂಗಳು ಅಥವಾ ಕಾಮಗಾರಿ ಮುಗಿಯುವ ವರೆಗೆ |
| 2 | 3ನೇ ಭಾಗೀದಾರ ಸಲಹೆಗಾರರಿಂದ ಸೇವೆ ಮತ್ತು ಕಾಮಗಾರಿಗಳ ಗುಣ ನಿಯಂತ್ರಣ ಪರೀಕ್ಷೆಗಳನ್ನು ತುಂಗಭದ್ರಾ ಎಡದಂಡೆ ಕಾಲುವೆ ಕಿ.ಮೀ.38.00 ರಿಂದ 73.00 ರ ವರೆಗೆ ಬರುವ ಮುಖ್ಯ ಕಾಲುವೆಯ ಹಾರ್ಡ್ ಪ್ಯಾಸೇಜ್, ರಸ್ತೆ ಅಭಿವೃದ್ಧಿ ಕಾಮಗಾರಿ ಹಾಗೂ ವಿತರಣಾ ಕಾಲುವೆ 21,25,27,28,29,30, 31,33, 34, ಹಾಗೂ ಉಪಕಾಲುವೆಗಳಲ್ಲಿ ಬರುವ ಕಾಮಗಾರಿಗಳು ಮತ್ತು ವಡ್ಡರಹಟ್ಟಿ ಕ್ಯಾಂಪಿನಲ್ಲಿ ಪಾರ್ಕ್ ನಿರ್ಮಾಣ. ಒಟ್ಟು ಕಾಮಗಾರಿಗಳ ಮೊತ್ತ – ರೂ.285.00 ಲಕ್ಷಗಳು | 8.50 | 22000 | 1000 | 5625 | 3 ತಿಂಗಳು ಅಥವಾ ಕಾಮಗಾರಿ ಮುಗಿಯುವ ವರೆಗೆ |

| ಕ್ರ. ಸಂ | ಕಾಮಗಾರಿಯ ಹೆಸರು | ಟೆಂಡರ್ ಗಿಟ್ಟ ಮೊತ್ತ ಲಕ್ಷಗಳಲ್ಲಿ | ಇ.ಎಂ.ಡಿ ಮೊತ್ತ ರೂ. ಗಳಲ್ಲಿ | ಖಾಲಿ (ಪ್ರೀಕ್ವಾಲಿಫಿಕೇಶನ್ ಬಿಡ್ ಫಾರಂಗಾಗಿ ನಿಗದಿಪಡಿಸಿದ ಮೊತ್ತ ( ಪ್ರತಿ ಸೆಟ್‌ಗೆ) ಎಲ್ಲಾ ತೆರಿಗೆಗಳು ಸೇರಿ ರೂ ಗಳಲ್ಲಿ | ಖಾಲಿ ಟೆಂಡರ್ ಫಾರಂಗಾಗಿ ನಿಗದಿಪಡಿಸಿದ ಮೊತ (ಪ್ರತಿ ಸೆಟ್‌ಗೆ) ಎಲ್ಲಾ ತೆರಿಗೆಗಳು ಸೇರಿ ರೂ ಗಳಲ್ಲಿ | ಮುಗಿಸ ಬೇಕಾದ ಅವದಿ |
|---|---|---|---|---|---|---|
| **ನಂ.3 ಕಾಲುವೆ ವಿಭಾಗ ಸಿಂಧನೂರ** | | | | | | |
| 3 | 3ನೇ ಭಾಗೀದಾರ ಸಲಹೆಗಾರರಿಂದ ಸೇವೆ ಮತ್ತು ಕಾಮಗಾರಿ ಗಳ ಗುಣ ನಿಯಂತ್ರಣ ಪರೀಕ್ಷೆ ಗಳನ್ನು ತುಂಗಭದ್ರಾ ಎಡದಂಡೆ ಮುಖ್ಯಕಾಲುವೆ ಮೈಲ್ 51,53,57 ಹಾಗು 69 ರಲ್ಲಿ ಹಾರ್ಡ್ ಪ್ಯಾಸೇಜ್ ನಿರ್ಮಾಣದ ಕಾಮಗಾರಿ ಮೈಲ್ 63,64,69 ರಲ್ಲಿ ಸಿ.ಡಿ ಕಾಮಗಾರಿಗಳ ಅಭಿವೃದ್ಧಿ ಹಾಗೂ ವಿತರಣಾ ಕಾಲುವೆ 36,40,45,46,48, 49,51 ,52, 54, ಮೊದಲನೇ ರೀಚ್ ಹಾಗು 54 2ನೇ ರೀಚ್ ಮತ್ತು 55,56ರ ವಿವಿಧ ಭಾಗಗಳಲ್ಲಿ ಬರುವ ವಿತರಣಾಕಾಲುವೆ ಅಭಿವೃದ್ಧಿ ಕಾಮಗಾರಿಗಳು. ಒಟ್ಟು ಕಾಮಗಾರಿಗಳ ಮೊತ್ತ – ರೂ.1140.50 ಲಕ್ಷಗಳು | 34.00 | 51000 | 2000 | 11250 | 3 ತಿಂಗಳು ಅಥವಾ ಕಾಮಗಾರಿ ಮುಗಿಯುವ ವರೆಗೆ |
| **ನಂ.4 ಕಾಲುವೆ ವಿಭಾಗ ಸಿರವಾರ** | | | | | | |
| 4 | 3ನೇ ಭಾಗೀದಾರ ಸಲಹೆಗಾರರಿಂದ ಸೇವೆ ಮತ್ತು ಕಾಮಗಾರಿಗಳ ಗುಣ ನಿಯಂತ್ರಣ ಪರೀಕ್ಷೆಗಳನ್ನು ತುಂಗಭದ್ರಾ ಎಡದಂಡೆ ವಿತರಣಾ ಕಾಲುವೆ ನಂ.65,66,69, 71 ಮತ್ತು 73 ರಲ್ಲಿ ಸಿ.ಸಿ ಲೈನಿಂಗ್, ಪಿ.ಓ ಡ್ರಾಪ್ಸ್‌ಗಳು ಹಾಗೂ ಸಿ.ಡಿಗಳ ರಚನೆ ಮತ್ತು ಅವುಗಳ ಸುಧಾರಣೆಗೊಳಿಸುವುದು. ಒಟ್ಟು ಕಾಮಗಾರಿಗಳ ಮೊತ್ತ – ರೂ.434.00 ಲಕ್ಷಗಳು | 13.00 | 20000 | 2000 | 11250 | 3 ತಿಂಗಳು ಅಥವಾ ಕಾಮಗಾರಿ ಮುಗಿಯುವ ವರೆಗೆ |
| 5 | 3ನೇ ಭಾಗೀದಾರ ಸಲಹೆಗಾರರಿಂದ ಸೇವೆ ಮತ್ತು ಕಾಮಗಾರಿಗಳ ಗುಣ ನಿಯಂತ್ರಣ ಪರೀಕ್ಷೆ ಗಳನ್ನು ತುಂಗಭದ್ರಾ ಎಡದಂಡೆ ವಿತರಣಾ ಕಾಲುವೆ ನಂ.76,81,82,84, 85,89,90 ಮತ್ತು 92 ರಲ್ಲಿ ಸಿ.ಸಿ ಲೈನಿಂಗ್, ಪಿ.ಓ ಡ್ರಾಪ್ಸ್‌ಗಳು ಹಾಗೂ ಸಿ.ಡಿಗಳ ರಚನೆ ಮತ್ತು ಅವುಗಳ ಸುಧಾರಣೆಗೊಳಿಸುವುದು. ಒಟ್ಟು ಕಾಮಗಾರಿಗಳ ಮೊತ್ತ – ರೂ.1293.00 ಲಕ್ಷಗಳು | 38.70 | 58000 | 2000 | 11250 | 3 ತಿಂಗಳು ಅಥವಾ ಕಾಮಗಾರಿ ಮುಗಿಯುವ ವರೆಗೆ |

| ಕ್ರ. ಸಂ | ಕಾಮಗಾರಿಯ ಹೆಸರು | ಟೆಂಡರ್ ಗಿಟ್ಟ ಮೊತ್ತ ಲಕ್ಷಗಳಲ್ಲಿ | ಇ.ಎಂ.ಡಿ ಮೊತ್ತ ರೂ. ಗಳಲ್ಲಿ | ಖಾಲಿ (ಪ್ರೀಕ್ವಾಲಿಫಿಕೇಶನ್ ಬಿಡ್ ಫಾರಂಗಾಗಿ ನಿಗದಿಪಡಿಸಿದ ಮೊತ್ತ ( ಪ್ರತಿ ಸೆಟ್‌ಗೆ) ಎಲ್ಲಾ ತೆರಿಗೆಗಳು ಸೇರಿ ರೂ ಗಳಲ್ಲಿ | ಖಾಲಿ ಟೆಂಡರ್ ಫಾರಂಗಾಗಿ ನಿಗದಿಪಡಿಸಿದ ಮೊತ (ಪ್ರತಿ ಸೆಟ್‌ಗೆ) ಎಲ್ಲಾ ತೆರಿಗೆಗಳು ಸೇರಿ ರೂ ಗಳಲ್ಲಿ | ಮುಗಿಸ ಬೇಕಾದ ಅವದಿ |
|---|---|---|---|---|---|---|
| **ನಂ.6 ಕಾಲುವೆ ವಿಭಾಗ ಬಳ್ಳಾರಿ** | | | | | | |
| 6 | 3ನೇ ಭಾಗೀದಾರ ಸಲಹೆಗಾರರಿಂದ ಸೇವೆ ಮತ್ತು ಕಾಮಗಾರಿಗಳ ಗುಣ ನಿಯಂತ್ರಣ ಪರೀಕ್ಷೆಗಳನ್ನು ತುಂಗಭದ್ರಾ ಬಲದಂಡೆ ಕಾಲುವೆ R.B.H.L.C.ಯ ವಿತರಣಾ ಕಾಲುವೆ 12,13,14,15,16,16ಎ ಮತ್ತು R.B.L.L.C ಯ ವಿತರಣಾ ಕಾಲುವೆ ಕೂರಿಗನೂರ ಕಾಲುವೆ, ಡಿ.ಪಿ 36, 33, 19, 21, 18 ಮತ್ತು 22 ರಲ್ಲಿ ಸಿ.ಸಿ ಲೈನಿಂಗ್ ರಚನೆ ಮತ್ತು ಸುಧಾರಣೆಗೊಳಿಸುವುದು. ಒಟ್ಟು ಕಾಮಗಾರಿಗಳ ಮೊತ್ತ – ರೂ.761.00 ಲಕ್ಷಗಳು | 22.80 | 35000 | 2000 | 11250 | 3 ತಿಂಗಳು ಅಥವಾ ಕಾಮಗಾರಿ ಮುಗಿಯುವ ವರೆಗೆ |
| 7 | 3ನೇ ಭಾಗೀದಾರ ಸಲಹೆಗಾರರಿಂದ ಸೇವೆ ಮತ್ತು ಕಾಮಗಾರಿಗಳ ಗುಣ ನಿಯಂತ್ರಣ ಪರೀಕ್ಷೆಗಳನ್ನು ತುಂಗಭದ್ರಾ ಬಲದಂಡೆ ಕಾಲುವೆ R.B.H.L.C.ಯ ವಿತರಣಾ ಕಾಲುವೆ 7,9,10,11, ಹಾಗೂ R.B.L.L.C ವಿತರಣಾ ಕಾಲುವೆಗಳಾದ ನಡವಿ, ಮುದ್ದಟ ನೂರ್, ಕೋಟೆಹಳ್ಳಿ, ಹಚ್ಚೊಳ್ಳಿ ವಿತರಣಾ ಕಾಲುವೆಗಳಲ್ಲಿ ಸಿ.ಸಿ ಲೈನಿಂಗ್ ರಚನೆ ಮತ್ತು ಸುಧಾರಣೆಗೊಳಿಸುವುದು. ಒಟ್ಟು ಕಾಮಗಾರಿಗಳ ಮೊತ್ತ – ರೂ.463.00 ಲಕ್ಷಗಳು | 13.80 | 21000 | 2000 | 11250 | 3 ತಿಂಗಳು ಅಥವಾ ಕಾಮಗಾರಿ ಮುಗಿಯುವ ವರೆಗೆ |

ಈ ಕಾಮಗಾರಿಗಳು ಮುಖ್ಯವಾಗಿ ಕಾಲುವೆ ಮತ್ತು ಉಪಕಾಲುವೆಗಳ ಆಧುನೀಕರಣ ಕಾಮಗಾರಿಗಳಾಗಿದ್ದು ಅವುಗಳಲ್ಲಿ ವಿಶೇಷವಾಗಿ ಕಾಮಗಾರಿಗಳಿಗೆ ಉಪಯೋಗಿಸಲ್ಪಡುವ ಸಾಮಗ್ರಿಗಳಾದ ಜೆಲ್ಲಿ, ಮರಳು, ಸಿಮೆಂಟ್, ಸ್ಟೀಲ್ ಅಲ್ಲದೇ ಕಾಲುವೆಗಳ ಬೆಡ್ಡ್, ಎಡ–ಬಲ ಭಾಗಗಳನ್ನು ಲೈನಿಂಗ್ ಮೂಲಕ ಬಲಪಡಿಸುವುದು, ಸಿ.ಸಿ/ಆರ್.ಸಿ.ಸಿ ಸಿಮೆಂಟ್ ಕಾಂಕ್ರೀಟ್ ಕ್ಯೂಬ್ ಹಾಗೂ ಮಣ್ಣಿನ ಕೋರ್ ಮತ್ತು ಸಿ.ಡಿ ಗಳನ್ನು ಬಲಪಡಿಸುವಿಕೆಯ ಎಲ್ಲಾ ಪರೀಕ್ಷಣಾ ಕಾಮಗಾರಿಗಳು ಸೇರಿರುತ್ತವೆ. **ಪೂರ್ವಾರ್ಹತೆ ಪಡೆಯಲು ಇದೇ ತೆರನಾದ ಗುಣನಿಯಂತ್ರಣ ಕಾಮಗಾರಿಗಳನ್ನು ಅದೇ ನಾಮಧೇಯದ ಅಥವಾ ಅದೇ ಹೆಸರಿನಲ್ಲಿ ಕಳೆದ ಐದು ವರ್ಷಗಳಲ್ಲಿ ನಿರ್ವಹಿಸಿರಬೇಕು** ಹಾಗೂ ಅರ್ಜಿಗಳನ್ನು ಈ ಕೆಳಕಂಡ ಅಗತ್ಯ ದಾಖಲೆಗಳು ಮತ್ತು ಸೂಚನೆಗಳಿಗೊಳಪಟ್ಟು ಪೂರ್ವಾರ್ಹತೆಯಲ್ಲಿ ಭಾಗವಹಿಸಬಹುದು.

I. **ಪೂರ್ವಾರ್ಹತೆಗೆ ಇರಬೇಕಾದ ಅಗತ್ಯ ದಾಖಲೆಗಳು/ ಸೂಚನೆಗಳು (ನಿಬಂಧನೆಗಳು)**

**A. ಅಗತ್ಯ ದಾಖಲೆಗಳು.**

1. ಏಜೆನ್ಸಿದಾರರ ನೋಂದಣಿ ಪ್ರಮಾಣ ಪತ್ರ
2. ಕಳೆದ ಐದು ವರ್ಷಗಳಲ್ಲಿ ನಿರ್ವಹಿಸಲಾದ ವಾರ್ಷಿಕವಾರು ವಿವರಗಳು

3. ಏಜೆನ್ಸಿ/ಸಂಸ್ಥೆಯ ರಚನೆ ಮತ್ತು ಸಂಘಟನಾ ವಿವರಣಾ ಪಟ್ಟಿ
4. ತಾಂತ್ರಿಕತೆ ಹೊಂದಿದ ಸಿಬ್ಬಂದಿಗಳ ವಿವರಗಳು.
5. ಪ್ರಯೋಗಾಲಯದ ತಾತ್ಕಾಲಿಕ ನಿರ್ಮಾಣ ಹಾಗೂ ನಿರ್ವಹಣೆಗೆ ಅವಶ್ಯಕವಿರುವ ಸಲಕರಣೆಗಳು ಮತ್ತು ಪರೀಕ್ಷೆಗಳನ್ನು ನೆರವೇರಿಸಲು ಬೇಕಾದ ಸೂಕ್ಷ್ಮ ಉಪಕರಣಗಳನ್ನು ಹೊಂದಿರುವ ಬಗೆಗಿನ ವಿವರಗಳು.
6. ಏಜೆನ್ಸಿದಾರರು ಕಳೆದ ಐದು ವರ್ಷಗಳ ಅವಧಿಯಲ್ಲಿ ಇದೇ ತೆರನಾದ ಯಾವುದಾದರೊಂದು ಕಾಮಗಾರಿಯನ್ನು ಕಾಮಗಾರಿಗಿಟ್ಟ ಮೊತ್ತದ ಕನಿಷ್ಟ ಶೇಖಡ.80 ರಷ್ಟು ಮೊತ್ತದ ಕಾಮಗಾರಿಯನ್ನು ಪ್ರಧಾನ ಏಜೆನ್ಸಿದಾರರಾಗಿ ತೃಪ್ತಿಕರವಾಗಿ ಕಡ್ಡಾಯವಾಗಿ ನಿರ್ವಹಿಸಿರಬೇಕು.
7. ಏಜೆನ್ಸಿದಾರರು ಪೂರ್ವಾರ್ಹತೆಗಾಗಿ ದೃಢೀಕರಿಸಿದ ಈ ಕೆಳಕಂಡ ಪ್ರಮಾಣ ಪತ್ರಗಳ ಪ್ರತಿಗಳನ್ನು ಒದಗಿಸುವುದು ಕಡ್ಡಾಯವಾಗಿದೆ. ಮೂಲ ದಾಖಲೆಗಳನ್ನು ಪೂರ್ವಾರ್ಹತೆಗಾಗಿ ತೆರೆಯುವ ವೇಳೆಯಲ್ಲಿ ತೋರಿಸಬೇಕಾಗುತ್ತದೆ.
    1. ಇ.ಪಿ.ಎಫ್(E.P.F) ರಿಜಿಸ್ಟ್ರೇಷನ್ ಪ್ರಮಾಣ ಪತ್ರ
    2. ಇತ್ತೀಚಿನ ವ್ಯಾಟ್ (VAT) ಕ್ಲಿಯರೆನ್ಸ್ ಪ್ರಮಾಣ ಪತ್ರ
    3. ಕಳೆದ ಮೂರು ವರ್ಷಗಳಲ್ಲಿ ಚಾರ್ಟರ್ಡ್ ಅಕೌಂಟೆಂಟ್ ಇವರಿಂದ ಪ್ರಮಾಣೀಕೃತಗೊಂಡ ಬ್ಯಾಲೆನ್ಸ್ ಶೀಟ್ ಒದಗಿಸುವುದು.
    4. ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆ ಕ್ಲಿಯರೆನ್ಸ್ ಪ್ರಮಾಣ ಪತ್ರ

**B. ಸೂಚನೆಗಳು (ನಿಬಂಧನೆಗಳು).**

1. ಯಾವುದೇ ದಾಖಲೆಗಳನ್ನು ಸಲ್ಲಿಸುವಾಗ ಕಾರ್ಯಪಾಲಕ ಅಭಿಯಂತರು ಹಾಗೂ ಇವರಿಗಿಂತ ಮೇಲಾಧಿಕಾರಿಗಳಿಂದ ದೃಢೀಕರಿಸಲ್ಪಟ್ಟ ಪತ್ರಗಳನ್ನು ಮಾತ್ರ ಮಾನ್ಯ ಮಾಡಲಾಗುತ್ತದೆ. ತಪ್ಪಿದಲ್ಲಿ ಪೂರ್ವಾರ್ಹತೆಗೆ ಪರಿಗಣಿಸಲಾಗುವುದಿಲ್ಲ.
2. ಷರತ್ತುಗಳನ್ನು ಸೂಚಿಸಿ ಸಲ್ಲಿಸಿದ ಹಾಗೂ ಅಪೂರ್ಣವಾಗಿ ಸಲ್ಲಿಸಿದ ಟೆಂಡರ್ ಫಾರಂಗಳನ್ನು ತಿರಸ್ಕರಿಸಲಾಗುವುದು.
3. ಟೆಂಡರ್‌ನಲ್ಲಿ ಭಾಗವಹಿಸುವ ಮುಂಚೆ ಏಜೆನ್ಸಿದಾರರು ಕಾಮಗಾರಿ ಸ್ಥಳಗಳನ್ನು ಗಮನಿಸಿ ಮುಂದುವರೆಯತಕ್ಕದ್ದು.
4. ಮುಖ್ಯ ಇಂಜಿನಿಯರ್ ನೀರಾವರಿ ಕೇಂದ್ರ ವಲಯ ಮುನಿರಾಬಾದ್ ಇವರು ಪ್ರೀ ಕ್ವಾಲಿಫಿಕೇಶನ್ ಬಿಡ್ (ತಾಂತ್ರಿಕ ಬಿಡ್)ನ್ನು ಅಂಗೀಕರಿಸುವ ಅಧಿಕಾರಿಯಾಗಿದ್ದು ಯಾವುದೇ ಕಾರಣ ನೀಡದೆ ಅಥವಾ ಎಲ್ಲಾ ಬಿಡ್‌ಗಳನ್ನು ತಿರಸ್ಕರಿಸುವ ಹಕ್ಕನ್ನು ಹೊಂದಿರುತ್ತಾರೆ.
5. ಎಲ್ಲಾ ಅಗತ್ಯ ದಾಖಲೆಗಳಲ್ಲೂ ಮತ್ತು ದೃಢೀಕರಣ ಪತ್ರದಲ್ಲೂ ಪೂರ್ಣ ಅಂಚೆ ವಿಳಾಸವನ್ನು, ದೂರವಾಣಿ ಮತ್ತು ಫ್ಯಾಕ್ಸ್ ನಂಬರುಗಳನ್ನು ತಪ್ಪದೆ ನಮೂದಿಸತಕ್ಕದ್ದು.
6. ಖಾಲಿ ಟೆಂಡರ್ ಫಾರಂಗಳನ್ನು ಕೇವಲ ಪ್ರೀಕ್ವಾಲಿಫಿಕೇಶನ್ (ತಾಂತ್ರಿಕ ಬಿಡ್) ಪ್ರಕ್ರಿಯೆಯಲ್ಲಿ ಯಶಸ್ವಿಯಾದ ಏಜೆನ್ಸಿದಾರರಿಗೆ ಮಾತ್ರ ನೀಡಲಾಗುತ್ತದೆ.

**ಪ್ರೀಕ್ವಾಲಿಫಿಕೇಶನ್ (ತಾಂತ್ರಿಕ ಬಿಡ್) ವಿವರಗಳ ವೇಳಾಪಟ್ಟಿ:**

ಏಜೆನ್ಸಿದಾರರು ಪೂರ್ವಾರ್ಹತೆ ಪ್ರಕ್ರಿಯೆಯಲ್ಲಿ ಭಾಗವಹಿಸಲು ಇಚ್ಚಿಸುವವರು ಕಾಲಂ 5 ರಲ್ಲಿ ಸೂಚಿಸಿದ ಮೊತ್ತವನ್ನು (ಪ್ರತಿ ಸೆಟ್‌ಗೆ ಹಿಂಪಡೆಯಲಾಗದ) ಕಾರ್ಯಪಾಲಕ ಅಭಿಯಂತರರು, ಗುಣನಿಯಂತ್ರಣ ವಿಭಾಗ, ಮುನಿರಾಬಾದ್ ಇವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್ ಹೊಸಪೇಟೆಯಲ್ಲಿ ಪಾವತಿಯಾಗುವಂತೆ ರಾಷ್ಟ್ರೀಕೃತ ಬ್ಯಾಂಕ್‌ಗಳ ಡಿ.ಡಿ. ಮುಖಾಂತರ ಸಂದಾಯ ಮಾಡಬೇಕು. ಮೊಹರಾದ ಲಕೋಟೆಯ ಮೇಲೆ "ಪ್ರಿಕ್ವಾಲಿಫಿಕೇಶನ್ ಬಿಡ್" ಯೆಂದು ನಮೂದಿಸಿ ಕಾಮಗಾರಿ ಹೆಸರನ್ನು ಬರೆಯತಕ್ಕದ್ದು.

1. ಖಾಲಿ ಪ್ರೀಕ್ವಾಲಿಫಿಕೇಶನ್ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ದಿನಾಂಕ: 16.3.2009 ಸಂಜೆ 5.30 ಗಂಟೆ ವರೆಗೆ.
2. ಖಾಲಿ ಪ್ರೀಕ್ವಾಲಿಫಿಕೇಶನ್ ಟೆಂಡರ್ ಫಾರಂಗಳನ್ನು(ದ್ವಿಪ್ರತಿಗಳಲ್ಲಿ) ನೀಡುವ ದಿನಾಂಕ:18.03.2009 ಸಂಜೆ 5.30ರ ವರೆಗೆ.
3. ಭರ್ತಿಮಾಡಿದ ಪ್ರೀಕ್ವಾಲಿಫಿಕೇಶನ್ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ದಿನಾಂಕ:20.03.2009 ಸಂಜೆ 4.00ರ ವರೆಗೆ.

    ಭರ್ತಿ ಮಾಡಿದ ಪ್ರೀಕ್ವಾಲಿಫಿಕೇಶನ್ ಟೆಂಡರ್ ಫಾರಂಗಳನ್ನು ತೆರೆಯುವ ದಿನಾಂಕ:20.03.2009 ಸಂಜೆ 4.30ರ ವರೆಗೆ.

4. ಅರ್ಹತೆಯಲ್ಲಿ ಯಶಸ್ವಿಯಾದ ಪ್ರೀಕ್ವಾಲಿಫಿಕೇಶನ್ ಏಜೆನ್ಸಿದಾರರ ಹೆಸರುಗಳನ್ನು ಕಛೇರಿಯ ನೋಟಿಸ್ ಬೋರ್ಡ್‌ನಲ್ಲಿ ಪ್ರಕಟಿಸಲಾಗುವುದು/ದೂರವಾಣಿ/ಅಂಚೆ ಮೂಲಕ ತಿಳಿಸಲಾಗುವುದು.

**II. ಟೆಂಡರ್ ವಿವರಗಳ ವೇಳಾಪಟ್ಟಿ ಮತ್ತು ಸೂಚನೆಗಳು/ನಿಬಂಧನೆಗಳು:**

**A). ಟೆಂಡರ್ ವೇಳಾ ಪಟ್ಟಿ:**

ಕೇವಲ ಅರ್ಹತೆ ಪಡೆದ ಏಜೆನ್ಸಿದಾರರಿಗೆ ಮಾತ್ರ ಟೆಂಡರ್‌ನಲ್ಲಿ ಭಾಗವಹಿಸಲು ಅವಕಾಶವಿರುತ್ತದೆ. ಏಜೆನ್ಸಿದಾರರು ಮೇಲ್ಕಾಣಿಸಿದ ಕಾಲಂ 6 ರಲ್ಲಿ ಸೂಚಿಸುವ ಮೊತ್ತವನ್ನು (ಪ್ರತಿ ಸೆಟ್‌ಗೆ ಹಿಂಪಡೆಯಲಾಗದ) ದ್ವಿಪ್ರತಿಯಲ್ಲಿ ಖಾಲಿ ಟೆಂಡರ್‌ಗಳಿಗಾಗಿ ಅರ್ಜಿಯನ್ನು ಕಾರ್ಯಪಾಲಕ ಅಭಿಯಂತರರು, ಗುಣನಿಯಂತ್ರಣ ವಿಭಾಗ, ಮುನಿರಾಬಾದ್ ಇವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್ ಹೊಸಪೇಟೆಯಲ್ಲಿ ಪಾವತಿಯಾಗುವಂತೆ ರಾಷ್ಟ್ರೀಕೃತ ಬ್ಯಾಂಕ್‌ಗಳ ಡಿ.ಡಿ. ಮುಖಾಂತರ ಸಂದಾಯ ಮಾಡಬೇಕು.

1. ಖಾಲಿ ಟೆಂಡರ್ ಫಾರಂಗಳಿಗಾಗಿ ಏಜೆನ್ಸಿದಾರರು ಅರ್ಜಿ ಸಲ್ಲಿಸುವ **ದಿನಾಂಕ:25.3.2009 ಸಂಜೆ 5.30 ಗಂಟೆ ವರೆಗೆ.**
2. ಖಾಲಿ ಟೆಂಡರ್ ಫಾರಂಗಳನ್ನು ಏಜೆನ್ಸಿದಾರರಿಗೆ ನೀಡುವ **ದಿನಾಂಕ:28.3.2009 ಸಂಜೆ 5.30 ಗಂಟೆ ವರೆಗೆ.**
3. ಭರ್ತಿಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ **ದಿನಾಂಕ:31.3.2009 ಸಂಜೆ 4.00 ಗಂಟೆ ವರೆಗೆ.**
4. ಭರ್ತಿಮಾಡಿದ ಟೆಂಡರ್ ಫಾರಂಗಳನ್ನು ತೆರೆಯುವ **ದಿನಾಂಕ:31.3.2009 ಸಂಜೆ 4.30 ಗಂಟೆ ವರೆಗೆ.**
5. ಟೆಂಡರ್ ಫಾರಂಗಳನ್ನು **ತೆರೆಯುವ ಸ್ಥಳ**: ಕಾರ್ಯಪಾಲಕ ಅಭಿಯಂತರರು, ಗುಣನಿಯಂತ್ರಣ ವಿಭಾಗ, ಮುನಿರಾಬಾದ್ ಇವರ ಕಛೇರಿಯಲ್ಲಿ ಏಜೆನ್ಸಿದಾರರ/ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು.

**B.) ಸೂಚನೆಗಳು (ನಿಬಂಧನೆಗಳು):**

1. ಇ.ಎಂ.ಡಿ. (EMD) ಮೊತ್ತವನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಡಿ.ಡಿ./ಎಫ್.ಡಿ.ಆರ್/ಪೇ ಆರ್ಡರ್/ ಹಿಂಪಡೆಯಲಾಗದ ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಕಾರ್ಯಪಾಲಕ ಅಭಿಯಂತರರು, ಗುಣನಿಯಂತ್ರಣ ವಿಭಾಗ, ಮುನಿರಾಬಾದ್ ಇವರ ಹೆಸರಿನಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್ ಹೊಸಪೇಟೆಯಲ್ಲಿ ಪಾವತಿಯಾಗುವಂತೆ ಪಡೆದು ಸಲ್ಲಿಸಬೇಕು. ಇ.ಎಂ.ಡಿ ಸಿಂಧುತ್ವವು(ವ್ಯಾಲಿಡಿಟಿ) ಟೆಂಡರ್ ತೆರೆಯುವ ದಿನಾಂಕ ದಿಂದ 180 ದಿನಗಳವರೆಗೆ ಚಾಲ್ತಿಯಲ್ಲಿರಬೇಕು. ಇ.ಎಂ.ಡಿ. ಲಗತ್ತಿಸದೇ ಇರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
2. ಷರತ್ತುಗಳನ್ನು ಸೂಚಿಸಿ ಸಲ್ಲಿಸಿದ ಹಾಗೂ ಅಪೂರ್ಣವಾಗಿ ಸಲ್ಲಿಸಿದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ಕನಿಷ್ಠದರ ನಮೂದಿಸಿ ಉತ್ತೀರ್ಣರಾಗಿ ಹೊರಹೊಮ್ಮಿದ ಯಶಸ್ವಿ ಏಜೆನ್ಸಿದಾರರು ಪರ್‌ಫಾರ್ಮೆನ್ಸ್ ಸೆಕ್ಯೂರಿಟಿಗಾಗಿ ಹೆಚ್ಚುವರಿಯಾಗಿ ಬ್ಯಾಂಕ್ ಗ್ಯಾರಂಟಿ ಅಥವಾ ಇಲಾಖೆ ಇಚ್ಚಿಪಡುವ ಮಾದರಿಯಲ್ಲಿ ಕೂಗಲಾದ ಮೊತ್ತದನ್ವಯ ವ್ಯತ್ಯಾಸವನ್ನು ತುಂಬತಕ್ಕದ್ದು.
4. ಈ ಕಾರ್ಯಕ್ರಮ ಕೇವಲ ಸೀಮಿತ ಅವಧಿಗೆ ಇದ್ದು ಕಾಮಗಾರಿ ವಿಭಾಗದ ಕಾಮಗಾರಿಗಳು ಪ್ರಾರಂಭಗೊಂಡ ದಿನದಿಂದ ಸಮನಾಂತರವಾಗಿ ಅಗತ್ಯ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡು ಎಲ್ಲಾ ರೀತಿಯಲ್ಲಿ ವಹಿಸಲಾದ ಕೆಲಸಗಳನ್ನು ನಿಯಮಾವಳಿಗಳ ಪ್ರಕಾರ ವೇಳೆಗೆ ಸರಿಯಾಗಿ ಮುಗಿಸುವುದು.
5. ಇತರೆ ನಿಬಂಧನೆಗಳು ಗುತ್ತಿಗೆ ದಾಸ್ತಾವೇಜಿನಲ್ಲಿ ನೋಡಬಹುದು ಹಾಗೂ ಕರ್ನಾಟಕ ನಾಗರೀಕ ಪಾರದರ್ಶಕ ನಿಯಮಗಳನ್ನು ವೀಕ್ಷಿಸಬಹುದು.
6. ಟೆಂಡರ್‌ನಲ್ಲಿ ಸೂಚಿಸಲಾದ ದಿನಾಂಕಗಳು ಸಾರ್ವಜನಿಕ ರಜಾದಿನಗಳಾಗಿದ್ದಲ್ಲಿ ಅಥವಾ ಹಾಗೆ ಘೋಷಿಸಿದ್ದಲ್ಲಿ ಆ ದಿನಗಳಿಗೆ ಬದಲಾಗಿ ಮುಂದಿನ ಕೆಲಸದ ದಿನದಂದು ಅನ್ವಯವಾಗುವಂತೆ ತಿಳಿಯುವುದು.
7. ಟೆಂಡರ್ ಪಡೆದು ಹಾಕುವ ಮೊದಲು ಏಜೆನ್ಸಿದಾರರು ಯೋಜನಾ ಪ್ರದೇಶವನ್ನು ಗಮನಿಸಿ ಮುಂದುವರೆಯತಕ್ಕದ್ದು.
8. ಯಾವುದೇ ದಾಖಲೆಗಳನ್ನು ಸಲ್ಲಿಸುವಾಗ ಕಾರ್ಯಪಾಲಕ ಅಭಿಯಂತರರು ಹಾಗೂ ಇವರಿಗಿಂತ ಮೇಲಾಧಿಕಾರಿಗಳಿಂದ ದೃಢೀಕರಿಸಲ್ಪಟ್ಟ ಪ್ರತಿಗಳನ್ನು ಮಾತ್ರ ಮಾನ್ಯ ಮಾಡಲಾಗುತ್ತದೆ. ತಪ್ಪಿದಲ್ಲಿ ಅಂತಹ ದಾಖಲೆಗಳನ್ನು ತಿರಸ್ಕರಿಸಲಾಗುವುದು.
9. ಕರ್ನಾಟಕ ಸರ್ಕಾರದಿಂದ ಕಾಲ ಕಾಲದಲ್ಲಿ ಬಿಡುಗಡೆಯಾಗುವ ಎಲ್.ಓ.ಸಿ.ಸ್ವೀಕೃತಿ ಅವಲಂಬಿಸುವ ನಿಬಂಧನೆಗೊಳಪಟ್ಟು ಬಿಲ್ಲುಗಳನ್ನು ಪಾವತಿ ಮಾಡಲಾಗುವುದು. ತಡವಾದಲ್ಲಿ ಯಾವುದೇ ಹಕ್ಕು ಚಲಾಯಿಸಲು ಆಸ್ಪದವಿರುವುದಿಲ್ಲ.

ಕಾರ್ಯಪಾಲಕ ಅಭಿಯಂತರರು,

ಪಿ.ಆರ್. 205 ಗುಣ ನಿಯಂತ್ರಣ ವಿಭಾಗ, ಮುನಿರಾಬಾದ್.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**
**ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**
**ಟೆಂಡರ್ ಪ್ರಕಟಣೆ**
**(ಸ್ಟಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯೂ–4ರ ಅನ್ವಯ ಗುತ್ತಿಗೆ ಆಹ್ವಾನ)**
**ಕ್ರ.ಸಂ.ಸನೀ.ವಿ.ಬೆಳಗಾವಿ/ಸ.ಇಂ.ಕಿ.ಇಂ./ಟೆಂಡರ/2008–09/702, ದಿನಾಂಕ: 21ನೇ ಫೆಬ್ರವರಿ 2009**

1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ–2000ರ ಅಡಿಯಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಅರ್ಹ ಗುತ್ತಿಗೆದಾರರಿಂದ ಗುತ್ತಿಗೆಯನ್ನು "ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ" ಇವರಿಂದ ದ್ವಿ ಲಕೋಟೆ ಪದ್ದತಿಯಲ್ಲಿ ಆಹ್ವಾನಿಸಲಾಗಿದೆ. ದ್ವಿ ಲಕೋಟೆ ಪದ್ದತಿಯನ್ನು ಕೆಟಿಪಿಪಿ ಅಧಿನಿಯಮ 28ರಂತೆ ಅನುಸರಿಸಲಾಗುವುದು. ಗುತ್ತಿಗೆದಾರರು ಟೆಂಡರ್‌ಗಳನ್ನು ಎರಡು ಪ್ರತ್ಯೇಕ ಲಕೋಟೆಗಳಲ್ಲಿ ಸೀಲ್ ಮಾಡಿ ಸಲ್ಲಿಸಬೇಕು ಮೊದಲನೆಯ ಲಕೋಟೆಯಲ್ಲಿ ಇ.ಎಂ.ಡಿ ಹಾಗೂ ಗುತಿಗೆದಾರರ ಗುತ್ತಿಗೆ ನಿರ್ವಹಿಸಲು ಇರುವ ಸಾಮರ್ಥ್ಯದ ವಿವರಗಳು (ಐಎಫ್‌ಟಿ. ಸೂಚನೆ 3 ಮತ್ತು 6ರಲ್ಲಿ ವಿವರಿಸಿದಂತೆ) ಹಾಗೂ ಎರಡನೆಯ ಲಕೋಟೆಯಲ್ಲಿ ಆರ್ಥಿಕ ಗುತ್ತಿಗೆಯನ್ನು ಸಲ್ಲಿಸಬೇಕು. ಮೊದಲನೆಯ ಲಕೋಟೆಯನ್ನು ಮೊದಲು ತೆರೆಯಲಾಗುವುದು ತದನಂತರ ಕೇವಲ ಗುತ್ತಿಗೆಯನ್ನು ನಿರ್ವಹಿಸಲು ಅರ್ಹ ವಿರುವ ಗುತ್ತಿಗೆದಾರರ ಎರಡನೆಯ ಲಕೋಟೆಯನ್ನು ಮಾತ್ರ ತೆರೆಯಲಾಗುವುದು. ಗುತ್ತಿಗೆ ಪಡೆಯಲು ಕನಿಷ್ಠ ಅವಶ್ಯಕ ಅರ್ಹತೆಗಳಿಗಾಗಿ ಗುತ್ತಿಗೆದಾರರು ಸೂಚನೆಗಳಲ್ಲಿ ಕಲಂ–3ನ್ನು ಸೂಕ್ಷ್ಮವಾಗಿ ಗಮನಿಸುವಂತೆ ಸೂಚಿಸಲಾಗಿದೆ.
2. ದಿನಾಂಕ:23.3.09 ರಿಂದ 28.3.09ರ ಒಳಗಿನ ಅವಧಿಯಲ್ಲಿ (ಕಛೇರಿ ಕಾರ್ಯಾವಧಿಯಲ್ಲಿ) ಕೆಳಗೆ ಕಾಣಿಸಿದ ಶುಲ್ಕವನ್ನು (ಹಿಂದಿರುಗಿಸಲಾಗದ) ಯಾವುದಾದರೂ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದ, ಬೆಳಗಾವಿಯಲ್ಲಿ ನಗದೀಕರಣ ಮಾಡಬಹುದಾದ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆಯಲಾದ ಡಿ.ಡಿ., ಪೇ ಆರ್ಡರ್ ಅಥವಾ ನಗದು ರೂಪದಲ್ಲಿ ತುಂಬಿ ಖಾಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ ಇವರ ಕಛೇರಿಯಿಂದ ಪಡೆದುಕೊಳ್ಳಬೇಕು. ಗುತ್ತಿಗೆಗೆ ಸಂಬಂಧಿಸಿದ ಎಲ್ಲ ವಿವರಗಳನ್ನು ಆಸಕ್ತ ಗುತ್ತಿಗೆದಾರರು ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಛೇರಿಯಲ್ಲಿ ಪಡೆದುಕೊಳ್ಳಬೇಕು. ಗುತ್ತಿಗೆ ಪತ್ರಗಳನ್ನು ನೊಂದಾಯಿತ ಅಂಚೆ/ವೇಗದ ಅಂಚೆ ಮೂಲಕ ಪಡೆಯಲು ಇಚ್ಚಿಸಿದಲ್ಲಿ ರೂ.200.00ಗಳ ಹೆಚ್ಚುವರಿ ಶುಲ್ಕವನ್ನು ಭರಿಸಬೇಕಾಗುತ್ತದೆ. ಗುತ್ತಿಗೆ ಪತ್ರಗಳನ್ನು ಅಂಚೆ ಮೂಲಕ ಪಡೆಯುವಾಗ ವಿಳಂಬವಾದಲ್ಲಿ ಅಥವಾ ಗುತ್ತಿಗೆ ಪತ್ರಗಳು ಸ್ವೀಕೃತವಾಗದಿದ್ದಲ್ಲಿ ಕಾರ್ಯನಿರ್ವಾಹಕ ಇಂಜಿನಿಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರು ಹೊಣೆಗಾರರಾಗುವುದಿಲ್ಲ.
3. ಕಾಮಗಾರಿಗಾಗಿ ನಿರ್ದಿಷ್ಟಪಡಿಸಿದ ಕೆಳಗೆ ನಮೂದಿಸಿದ ಮುಂಗಡ ಠೇವಣಿಯನ್ನು ಗುತ್ತಿಗೆ ಪತ್ರಗಳೊಂದಿಗೆ ಸಲ್ಲಿಸತಕ್ಕದ್ದು. ಗುತ್ತಿಗೆ ಪತ್ರಗಳಲ್ಲಿ ನಿರ್ದಿಷ್ಟಪಡಿಸಿರುವ ಯಾವುದಾದರೊಂದು ರೂಪದಲ್ಲಿ ಗುತ್ತಿಗೆ ಅರ್ಹತಾ ಅವಧಿಗಿಂತ 45 ದಿನಗಳ ಹೆಚ್ಚುವರಿ ಅವಧಿಯನ್ನು (ಒಟ್ಟಾರೆ 135 ದಿನಗಳ ಅವಧಿ) ಅರ್ಹತಾ ಅವಧಿಯಾಗಿ ಹೊಂದಿರುವ ಹಾಗೂ ಕಾರ್ಯನಿರ್ವಾಹಕ ಇಂಜಿನಿಯರರು ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆದ ಮತ್ತು ಬೆಳಗಾವಿಯಲ್ಲಿ ನಗದೀಕರಣವಾಗುವ ಮುಂಗಡ ಠೇವಣಿಯನ್ನು ಸಲ್ಲಿಸಬೇಕು.
4. ಭರ್ತಿ ಮಾಡಿದ ಗುತ್ತಿಗೆ ಪತ್ರಗಳನ್ನು ದಿನಾಂಕ: 6.4.09ರ ಮಧ್ಯಾಹ್ನ 16.00 ಘಂಟೆಯೊಳಗಾಗಿ (ಕಛೇರಿ ಕಾರ್ಯಾವಧಿಯಲ್ಲಿ) ಮುಖ್ಯ ಇಂಜಿನೀಯರರು ಸಣ್ಣ ನೀರಾವರಿ (ಉ)ವಲಯ ಬಿಜಾಪೂರ, ಅಧೀಕ್ಷಕ ಇಂಜಿನಿಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಾರ್ಯಾಲಯದಲ್ಲಿ ಸ್ವೀಕರಿಸಲಾಗುವುದು. ಮತ್ತು ಸಾಧ್ಯವಾದಲ್ಲಿ ಮರುದಿವಸ 16.00 ಘಂಟೆಗೆ ಆಸಕ್ತರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ಮೊದಲನೆಯ ಲಕೋಟೆಯನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಾರ್ಯಾಲಯದಲ್ಲಿ ತೆರೆಯಲಾಗುವುದು. ನಮೂದಿಸಿದ ದಿನಾಂಕವು ರಜಾ ದಿನವಾಗಿದ್ದಲ್ಲಿ ಟೆಂಡರ್ ಸ್ವೀಕರಿಸುವ ಹಾಗೂ ತೆರೆಯುವ ದಿನವು ಮುಂದಿನ ಕಛೇರಿ ಕಾರ್ಯನಿರ್ವಹಿಸುವ ದಿನದಂದು ಮೊದಲಿನ ನಿಗದಿತ ವೇಳೆಯಲ್ಲಿ ಸ್ವೀಕರಿಸಲಾಗುವುದು ಹಾಗೂ ಮೊದಲಿನ ನಿಗದಿತ ಸ್ಥಳದಲ್ಲಿ ತೆರೆಯಲಾಗುವುದು.
5. ಪೂರ್ವ ಟೆಂಡರ್ ಸಭೆಯನ್ನು ದಿನಾಂಕ:2.4.09 ರಂದು 11.00ಗಂಟೆಗೆ ಈ ಕಛೇರಿಯಲ್ಲಿ (ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ) ಕರೆಯಲಾಗಿದ್ದು ಗುತ್ತಿಗೆದಾರರ ವಿಚಾರಣೆಗಳಿಗೆ ಹಾಗೂ ವಿವಾದಾಂಶಗಳಿಗೆ ವಿವರಣೆಯನ್ನು ನೀಡಲಾಗುವುದು. (ಟೆಂಡರ್ ಪತ್ರಿಕೆಗಳ "ಗುತ್ತಿಗೆದಾರರಿಗೆ ಸೂಚನೆಗಳು" ಕಲಂ ಸಂ.8.2ರಂತೆ)

6. ಇನ್ನುಳಿದ ವಿವರಗಳನ್ನು ಹಾಗೂ ನಿಯಮಗಳನ್ನು ಮಾದರಿ ಗುತ್ತಿಗೆ ದಾಖಲೆ (ಕೆಡಬ್ಲ್ಯೂ–4)ದಲ್ಲಿ ವಿವರಿಸಲಾಗಿದ್ದು ಗುತ್ತಿಗೆದಾರರು ನಿಯಮಾವಳಿಗಳನ್ನು ಸಂಪೂರ್ಣ ಅಭ್ಯಸಿಸಿ ಅರ್ಥೈಸಿಕೊಳ್ಳಲು ಸೂಚಿಸಲಾಗಿದೆ.

| ಕ್ರಮ ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡಗಂಟು ಮೊತ್ತ (ರೂ.ಗಳಲ್ಲಿ) | ಟೆಂಡರ ಫಾರಂ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿ ಸಲಾಗದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 1 | 2 | 3 | 4 | 5 | 6 |
| 1. | ಬೆಳಗಾವಿ ಜಿಲ್ಲೆ ರಾಯಬಾಗ ತಾಲೂಕಿನ ಬೆಂಡವಾಡ ಗ್ರಾಮದ ರೈತರಿಗೆ ನೀರಾವರಿ ಯೋಜನೆ | 295.00 | 4,43,000/– | 25000+ Tax | 11 ತಿಂಗಳು (ಮಳೆಗಾಲ ಸೇರಿ) |
| 2. | ಬೆಳಗಾಂವ ಜಿಲ್ಲೆ ಚಿಕ್ಕೋಡಿ ತಾಲೂಕಿನ ಶಿರಗಾಂವ ಹತ್ತಿರ ಏತ ನೀರಾವರಿ ಯೋಜನೆ | 330.00 | 4,95,000/– | 25000+ Tax | 18 ತಿಂಗಳು (ಮಳೆಗಾಲ ಸೇರಿ) |
| 3. | ಬೆಳಗಾಂವ ಜಿಲ್ಲೆ ಮತ್ತು ತಾಲೂಕಿನ ಬೆಳಗಾವಿ ನಗರದ ಲೇಂಡಿ ನಾಲಾ ಟ್ರೇನಿಂಗ್ ಕಾಮಗಾರಿ | 200.00 | 3,00,000/– | 25000+ Tax | 18 ತಿಂಗಳು (ಮಳೆಗಾಲ ಸೇರಿ) |

**ಎನ್.ಎಮ್. ಮನಗೂಳಿ**
ಕಾರ್ಯನಿರ್ವಾಹಕ ಇಂಜಿನೀಯರರು,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ

**WATER RESOURCES DEPARTMENT (MINOR IRRIGATION)**
**Office of the Executive Engineer, M.I. Division, Belgaum**
**INVITATION FOR TENDERS (IFT)**
**(As per Standard Tender Document KW-4)**
**IFT No.EE /MID/BGM/TND/AE .JE/08-09/702, Date:21st February 2009**

1. The Executive Engineer, M.I.Division, Belgaum invites tenders from eligible tenderers, for the construction of work detailed in the Table below. The tenderers may submit tenders for work given in the Table. Two Cover tender procedure as per Rule 28 KTPP Act shall be followed. The Tenderers are required to submit two separate sealed covers, one containing the Earnest Money Deposit and the details of the capability to undertake the tender (as detailed in IFT Clause 3 & 6), which will be opened first and the second cover containing the price tender which will be opened only if the Tendered is found to be qualified to execute the tendered works. The Tenderers are advised to note the minimum qualification criteria specified in Clause 3 of the Instructions to Tenders to qualify for award of the contract.
2. Tender documents may be purchased from the office of the Executive Engineer, M.I.Division, Belgaum. From **23.3.09 to 28.3.09** for a non-refundable fee (for two sets) as indicated in the Table below, in the form of cash or Demand Draft/Pay Order on any Nationalized/Scheduled bank payable at Belgaum, in favour of The Executive Engineer, M.I.Division, Belgaum. Interested tenderers may obtain further information at the same address. Tender documents requested by mail will be dispatched by registered/ speed post on payment of an extra amount of Rs.200/-. The Executive Engineer M.I.Division, Belgaum. Will not be held responsible for the postal delay if any, in the delivery of the documents or non- receipt of the same.
3. Tenders must be accompanied by earnest money deposit specified for the work in the Table below. Earnest money deposit will have to be in any one of the forms as specified in the Tender document and shall have to be valid for 45 days beyond the validity of the tender.
4. Tenders must be delivered at the office of the Chief Engineer, M.I.(N) Zone, Bijapur or office of the Superintending Engineer, M.I.Circle, Belgaum or office of the Executive Engineer M.I.Division,

Belgaum. On or before 16.00 hours on **6.4.09**. The First Cover Tenders will be opened on the ~~same day~~/ next day at 16.00 hours, in the presence of the Tenderers who wish to attend. If the office happens to be closed on the date of receipt of the tenders as specified, the tenders will be received and opened on the next working day at the same time and venue.

5. A Pre-tender meeting will be held on **2.4.09** at 11.00 hours at the office of the Executive Engineer M.I.Division, Belgaum to clarify the issues if any, and to answer questions on any matter that may be raised at that stage as stated in Clause 8.2 of 'Instructions to Tenderers' of the tender document.
6. Other details can be seen in the tender documents.

**TABLE**

| Sl. No. | Name of Work | Approximate value of work (Rs.in lakhs) | Earnest Money Deposit (Rs) | Cost of document (Rs) | Period of completion |
|---|---|---|---|---|---|
| 1 | Providing Irrigation Facility to Ryots of Bandawad Village Tq. Raibag Dist. Belgaum | 295.00 | 4,43,000/- | 25000+ Tax | 18 Months (Including Monsoon) |
| 2. | Construction of L.I.S. near Shiragaon Tq. Chikkodi. Dist. Belgaum | 330.00 | 4,95,000/- | 25000+ Tax | 18 Months (Including Monsoon) |
| 3. | Training Work of Lendi Nala of Belgaum Town in Tq. & Dist. Belgaum | 200.00 | 3,00,000/- | 25000+ Tax | 18 Months (Including Monsoon) |

**N.M. MANAGOLI**

P.R. 223 Executive Engineer, M.I.Division, Belgaum.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**

**ಟೆಂಡರ್ ಪ್ರಕಟಣೆ**

**(ಸ್ಟಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯೂ–3ರ ಅನ್ವಯ ಗುತ್ತಿಗೆ ಆಹ್ವಾನ)**

**ಕ್ರ.ಸಂ.ಸನೀ.ವಿ.ಬೆಳಗಾವಿ/ಸ.ಇಂ. ಕಿ.ಇಂ./ಟೆಂಡರ್/2008–09/703, ದಿನಾಂಕ: 21ನೇ ಫೆಬ್ರವರಿ 2009**

1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ–2000ರ ಅಡಿಯಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಅರ್ಹ ಗುತ್ತಿಗೆದಾರರಿಂದ ಗುತ್ತಿಗೆಯನ್ನು "ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ" ಇವರಿಂದ ದ್ವಿ ಲಕೋಟೆ ಪದ್ದತಿಯಲ್ಲಿ ಆಹ್ವಾನಿಸಲಾಗಿದೆ. ದ್ವಿ ಲಕೋಟೆ ಪದ್ದತಿಯನ್ನು ಕೆಟಿಪಿಪಿ ಅಧಿನಿಯಮ 28ರಂತೆ ಅನುಸರಿಸಲಾಗುವುದು. ಗುತ್ತಿಗೆದಾರರು ಟೆಂಡರ್‌ಗಳನ್ನು ಎರಡು ಪ್ರತ್ಯೇಕ ಲಕೋಟೆಗಳಲ್ಲಿ ಸೀಲ್ ಮಾಡಿ ಸಲ್ಲಿಸಬೇಕು ಮೊದಲನೆಯ ಲಕೋಟೆಯಲ್ಲಿ ಇ.ಎಂ.ಡಿ ಹಾಗೂ ಗುತಿಗೆದಾರರ ಗುತ್ತಿಗೆ ನಿರ್ವಹಿಸಲು ಇರುವ ಸಾಮರ್ಥ್ಯದ ವಿವರಗಳು (ಐಎಫ್‌ಟಿ. ಸೂಚನೆ 3 ಮತ್ತು 6ರಲ್ಲಿ ವಿವರಿಸಿದಂತೆ) ಹಾಗೂ ಎರಡನೆಯ ಲಕೋಟೆಯಲ್ಲಿ ಆರ್ಥಿಕ ಗುತ್ತಿಗೆಯನ್ನು ಸಲ್ಲಿಸಬೇಕು. ಮೊದಲನೆಯ ಲಕೋಟೆಯನ್ನು ಮೊದಲು ತೆರೆಯಲಾಗುವದು ತದನಂತರ ಕೇವಲ ಗುತ್ತಿಗೆಯನ್ನು ನಿರ್ವಹಿಸಲು ಅರ್ಹವಿರುವ ಗುತ್ತಿಗೆದಾರರ ಎರಡನೆಯ ಲಕೋಟೆಯನ್ನು ಮಾತ್ರ ತೆರೆಯಲಾಗುವುದು. ಗುತ್ತಿಗೆ ಪಡೆಯಲು ಕನಿಷ್ಠ ಅವಶ್ಯಕ ಅರ್ಹತೆಗಳಿಗಾಗಿ ಗುತ್ತಿಗೆದಾರರು ಸೂಚನೆಗಳಲ್ಲಿ ಕಲಂ–3ನ್ನು ಸೂಕ್ಷ್ಮವಾಗಿ ಗಮನಿಸುವಂತೆ ಸೂಚಿಸಲಾಗಿದೆ.
2. ದಿನಾಂಕ:23.03.09 ರಿಂದ 28.03.09ರ ಒಳಗಿನ ಅವಧಿಯಲ್ಲಿ (ಕಛೇರಿ ಕಾರ್ಯಾವಧಿಯಲ್ಲಿ) ಕೆಳಗೆ ಕಾಣಿಸಿದ ಶುಲ್ಕವನ್ನು (ಹಿಂದಿರುಗಿಸಲಾಗದ) ಯಾವುದಾದರೂ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದ, ಬೆಳಗಾವಿಯಲ್ಲಿ ನಗದೀಕರಣ ಮಾಡಬಹುದಾದ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆಯಲಾದ ಡಿ.ಡಿ., ಪೇ ಆರ್ಡರ್ ಅಥವಾ ನಗದು ರೂಪದಲ್ಲಿ ತುಂಬಿ ಖಾಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಛೇರಿಯಿಂದ ಪಡೆದುಕೊಳ್ಳಬೇಕು. ಗುತ್ತಿಗೆಗೆ ಸಂಬಂಧಿಸಿದ ಎಲ್ಲ ವಿವರಗಳನ್ನು ಆಸಕ್ತ ಗುತ್ತಿಗೆದಾರರು ಸಣ್ಣ

ನೀರಾವರಿ ವಿಭಾಗ ಬೆಳಗಾವಿ ಇವರ ಕಛೇರಿಯಲ್ಲಿ ಪಡೆದುಕೊಳ್ಳಬೇಕು. ಗುತ್ತಿಗೆ ಪತ್ರಗಳನ್ನು ನೊಂದಾಯಿತ ಅಂಚೆ/ವೇಗದ ಅಂಚೆ ಮೂಲಕ ಪಡೆಯಲು ಇಚ್ಚಿಸಿದಲ್ಲಿ ರೂ.200.00ಗಳ ಹೆಚ್ಚುವರಿ ಶುಲ್ಕವನ್ನು ಭರಿಸಬೇಕಾಗುತ್ತದೆ. ಗುತ್ತಿಗೆ ಪತ್ರಗಳನ್ನು ಅಂಚೆ ಮೂಲಕ ಪಡೆಯುವಾಗ ವಿಳಂಬವಾದಲ್ಲಿ ಅಥವಾ ಗುತ್ತಿಗೆ ಪತ್ರಗಳು ಸ್ವೀಕೃತವಾಗದಿದ್ದಲ್ಲಿ ಕಾರ್ಯನಿರ್ವಾಹಕ ಇಂಜಿನಿಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರು ಹೊಣೆಗಾರರಾಗುವುದಿಲ್ಲ.

3. ಕಾಮಗಾರಿಗಾಗಿ ನಿರ್ದಿಷ್ಟಪಡಿಸಿದ ಕೆಳಗೆ ನಮೂದಿಸಿದ ಮುಂಗಡ ಠೇವಣಿಯನ್ನು ಗುತ್ತಿಗೆ ಪತ್ರಗಳೊಂದಿಗೆ ಸಲ್ಲಿಸತಕ್ಕದು. ಗುತ್ತಿಗೆ ಪತ್ರಗಳಲ್ಲಿ ನಿರ್ದಿಷ್ಟಪಡಿಸಿರುವ ಯಾವುದಾದರೊಂದು ರೂಪದಲ್ಲಿ ಗುತ್ತಿಗೆ ಅರ್ಹತಾ ಅವಧಿಗಿಂತ 45 ದಿನಗಳ ಹೆಚ್ಚುವರಿ ಅವಧಿಯನ್ನು (ಒಟ್ಟಾರೆ 135 ದಿನಗಳ ಅವಧಿ) ಅರ್ಹತಾ ಅವಧಿಯಾಗಿ ಹೊಂದಿರುವ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆದ ಮತ್ತು ಬೆಳಗಾವಿಯಲ್ಲಿ ನಗದೀಕರಣವಾಗುವ ಮುಂಗಡ ಠೇವಣಿಯನ್ನು ಸಲ್ಲಿಸಬೇಕು.

4. ಭರ್ತಿ ಮಾಡಿದ ಗುತ್ತಿಗೆ ಪತ್ರಗಳನ್ನು ದಿನಾಂಕ: 6.4.09ರ ಮಧ್ಯಾಹ್ನ 16.00 ಘಂಟೆಯೊಳಗಾಗಿ (ಕಛೇರಿ ಕಾರ್ಯಾವಧಿಯಲ್ಲಿ) ಮುಖ್ಯ ಇಂಜಿನೀಯರರು ಸಣ್ಣ ನೀರಾವರಿ (ಉ)ವಲಯ ಬಿಜಾಪೂರ, ಅಧೀಕ್ಷಕ ಇಂಜಿನೀಯರ್ ಸಣ್ಣ ನೀರಾವರಿ ವೃತ್ತ ಬೆಳಗಾವಿ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಾರ್ಯಾಲಯದಲ್ಲಿ ಸ್ವೀಕರಿಸಲಾಗುವುದು. ಮತ್ತು ಸಾಧ್ಯವಾದಲ್ಲಿ ಮರುದಿವಸ 16.00 ಘಂಟೆಗೆ ಆಸಕ್ತರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ಮೊದಲನೆಯ ಲಕೋಟೆಯನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಾರ್ಯಾಲಯದಲ್ಲಿ ತೆರೆಯಲಾಗುವುದು. ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ಅಥವಾ ಘೋಷಿತ ರಜಾ ದಿನವಾದಲ್ಲಿ ಟೆಂಡರ್ ಸ್ವೀಕರಿಸುವ ಹಾಗೂ ತೆರೆಯುವ ದಿನವು ಮುಂದಿನ ಕಛೇರಿ ಕಾರ್ಯನಿರ್ವಹಿಸುವ ದಿನದಂದು ಮೊದಲಿನ ನಿಗದಿತ ವೇಳೆಯಲ್ಲಿ ಸ್ವೀಕರಿಸಲಾಗುವುದು ಹಾಗೂ ಮೊದಲಿನ ನಿಗದಿತ ಸ್ಥಳದಲ್ಲಿ ತೆರೆಯಲಾಗುವುದು.

5. ಇನ್ನುಳಿದ ವಿವರಗಳನ್ನು ಹಾಗೂ ನಿಯಮಗಳನ್ನು ಮಾದರಿ ಗುತ್ತಿಗೆ ದಾಖಲೆ (ಕೆಡಬ್ಲ್ಯೂ–3)ದಲ್ಲಿ ವಿವರಿಸಲಾಗಿದ್ದು ಗುತ್ತಿಗೆದಾರರು ನಿಯಮಾವಳಿಗಳನ್ನು ಸಂಪೂರ್ಣ ಅಭ್ಯಸಿಸಿ ಅರ್ಥೈಸಿಕೊಳ್ಳಲು ಸೂಚಿಸಲಾಗಿದೆ.

| ಕ್ರಮ ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡಗಂಟು ಮೊತ್ತ (ರೂ.ಗಳಲ್ಲಿ) | ಟೆಂಡರ್ ಫಾರಂ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿ ಸಲಾಗದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 1. | ಬೆಳಗಾಂವ ಜಿಲ್ಲೆ ಗೋಕಾಕ ತಾಲೂಕಿನ ಸುಣದೋಳಿ, ತಿಗಡಿ,ತಳಕಟನಾಳ ಹಾಗೂ ಬೈರನಟ್ಟಿ ಏತ ನೀರಾವರಿ ಯೋಜನೆಗಳಿಗೆ ಎಕ್ಸ್‌ಪ್ರೆಸ್ ಫೀಡರ್ ಲೈನ್ ನಿರ್ಮಾಣ | 65.00 | 1,30,000/– | 6500+ Tax | 11 ತಿಂಗಳು (ಮಳೆಗಾಲ ಸೇರಿ) |
| 2. | ಬೆಳಗಾಂವ ಜಿಲ್ಲೆ ಮತ್ತು ತಾಲೂಕಿನ ಮಲಪ್ರಭ ನದಿಯಿಂದ ಬಾಗೇವಾಡಿ ಹಾಗೂ ಇತರ ಗ್ರಾಮಗಳಿಗೆ ಏತ ನೀರಾವರಿ ಯೋಜನೆ. | 100.00 | 2,00,000/– | 10000+ Tax | 11 ತಿಂಗಳು (ಮಳೆಗಾಲ ಸೇರಿ) |

**ಎಸ್.ಎಮ್. ಮನಗೂಲಿ**

ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ

**WATER RESOURCES DEPARTMENT (MINOR IRRIGATION)**

**Office of the Executive Engineer, M.I. Division, Belgaum**

**INVITATION FOR TENDERS (IFT)**

**(As per Standard Tender Document KW-3)**

**IFT No.EE /MID/BGM/TND/AE &JE/08-09/703, Date: 21st February 2009**

1. The Executive Engineer M.I.Division, Belgaum. invites tenders from eligible tenderers, for the construction of works detailed in the Table below. The tenderers may submit tenders for any or all of the

works given in the Table. Two Cover Tender procedure as per Rule28 of the KTPP Act shall be followed. The Tenders are required to submit two separate sealed covers, one containing the Earnest money deposit and the details of their capability to undertake the tender (as detailed in IFT Clause 3and 6), which will be opened first and the second cover containing the price tender which will be opened only if the Tenderer is found to be qualified to execute the tendered work. The Tenderers are advised to note the minimum qualification criteria specified in Clause 3 of the Instructions to Tenderers to qualify for award of the contract.

2. Tender documents may be purchased from the office of Executive Engineer from **23.03.2009 to 28.03.2009** for a non-refundable fee (for two sets) as indicated in the Table below, in the form of cash or Demand Draft/Pay Order on any Nationalized/ Scheduled bank payable at Belgaum in favour of Executive Engineer M.I.Division, Belgaum. Interested tenders may obtain further information at the same address. Tender documents requested by mail will be dispatched by registered/speed post on payment of an extra amount of Rs.200/-. The Executive Engineer M.I.Division, Belgaum. will not be held responsible for the postal delay if any, in the delivery of the documents or non-receipt of the same.

3. Tenders must be accompanied by earnest money deposit specified for the work in the Table below. Earnest money deposit will have to be in any one of the forms as specified in the Tender document and shall have to be valid for 45 days beyond the validity of the tender.(Total 135 days Validity from the date of opening of Tender)

4. Tenders must be delivered at the office of the Chief Engineer, M.I.(N) Zone, Bijapur or office of the Superintending Engineer, M.I.Circle , Belgaum or office of the Executive Engineer M.I.Division, Belgaum. On or before 16.00 hours on **6.4.09**. The First Cover Tenders will be opened on the ~~same day~~/ next day at 16.00 hours, in the presence of the Tenderers who wish to attend. If the office happens to be closed on the date of receipt of the tenders as specified, the tenders will be received and opened on the next working day at the same time and venue.

5. Other details can be seen in the Standard Tender Documents (KW-3) .

**TABLE**

| Package No. | Name of work | Approximate value of work (Rs. In lakhs) | Earnest Money Deposit (Rs.) | Cost of document (Rs.) | Period of completion |
|---|---|---|---|---|---|
| 1 | 2 | 3 | 4 | 5 | 6 |
| 1. | Providing Express feeder line to Sunadholi, Tigadi, Talakatnal & Bharanatti L.I. Schemes in Chikkodi Tq. Belgaum Dist. | 65.00 | 1,30,000/- | 6500+ Tax | 11 months (including monsoon) |
| 2. | Construction of L.I.S. from Malaprabha River to Bagewadi other village Tq.& Dist. Belgaum. | 100.00 | 2,00,000/- | 10000+ Tax | 11 months (including monsoon) |

**N.M. MANAGOLI**

P.R. 224 Executive Engineer, M.I.Division, Belgaum.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬೆಳಗಾವಿ.**

**ಟೆಂಡರ ಪ್ರಕಟಣೆ**

**(ಸ್ಟಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯೂ–1 & 2 ರ ಅನ್ವಯ ಗುತ್ತಿಗೆ ಆಹ್ವಾನ)**

**ಕ್ರ.ಸಂ.ಸನೀ.ವಿ.ಬೆಳಗಾವಿ/ಸ.ಇಂ.& ಕಿ.ಇಂ./ಟೆಂಡರ್/2008–09/704, ದಿನಾಂಕ: 21ನೇ ಫೆಬ್ರವರಿ 2009**

1. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ–2000ರ ಅಡಿಯಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ಅರ್ಹ ಗುತ್ತಿಗೆದಾರರಿಂದ ಗುತ್ತಿಗೆಯನ್ನು "ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ

ನೀರಾವರಿ ವಿಭಾಗ ಬೆಳಗಾವಿ" ಇವರಿಂದ ಆಹ್ವಾನಿಸಲಾಗಿದೆ. ಗುತ್ತಿಗೆ ಪಡೆಯಲು ಕನಿಷ್ಠ ಅವಶ್ಯಕ ಅರ್ಹತೆಗಳಿಗಾಗಿ ಗುತ್ತಿಗೆದಾರರು ಸೂಚನೆಗಳಲ್ಲಿ ಕಲಂ–3ನ್ನು ಸೂಕ್ಷ್ಮವಾಗಿ ಗಮನಿಸುವಂತೆ ಸೂಚಿಸಲಾಗಿದೆ.

2. ದಿನಾಂಕ: 23.03.09 ರಿಂದ 28.03.09ರ ಒಳಗಿನ ಅವಧಿಯಲ್ಲಿ (ಕಛೇರಿ ಕಾರ್ಯಾವಧಿಯಲ್ಲಿ) ಈ ಕೆಳಗೆ ಕಾಣಿಸಿದ ಶುಲ್ಕವನ್ನು (ಹಿಂದಿರುಗಿಸಲಾಗದ) ಯಾವುದಾದರೂ ರಾಷ್ಟ್ರೀಕೃತ ಅಥವಾ ಶೆಡ್ಯೂಲ್ಡ್ ಬ್ಯಾಂಕಿನಿಂದ ಪಡೆದ, ಬೆಳಗಾವಿಯಲ್ಲಿ ನಗದೀಕರಣ ಮಾಡಬಹುದಾದ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆಯಲಾದ ಡಿ.ಡಿ., ಪೇ ಆರ್ಡರ್ ಅಥವಾ ನಗದು ರೂಪದಲ್ಲಿ ತುಂಬಿ ಖಾಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಛೇರಿಯಿಂದ ಪಡೆದುಕೊಳ್ಳಬೇಕು. ಗುತ್ತಿಗೆಗೆ ಸಂಬಂಧಿಸಿದ ಎಲ್ಲ ವಿವರಗಳನ್ನು ಆಸಕ್ತ ಗುತ್ತಿಗೆದಾರರು ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಛೇರಿಯಲ್ಲಿ ಪಡೆದುಕೊಳ್ಳಬೇಕು. ಗುತ್ತಿಗೆ ಪತ್ರಗಳನ್ನು ನೊಂದಾಯಿತ ಅಂಚೆ/ವೇಗದ ಅಂಚೆ ಮೂಲಕ ಪಡೆಯಲು ಇಚ್ಛಿಸಿದಲ್ಲಿ ರೂ.200.00ಗಳ ಹೆಚ್ಚುವರಿ ಶುಲ್ಕವನ್ನು ಭರಿಸಬೇಕಾಗುತ್ತದೆ. ಗುತ್ತಿಗೆ ಪತ್ರಗಳನ್ನು ಅಂಚೆ ಮೂಲಕ ಪಡೆಯುವಾಗ ವಿಳಂಬವಾದಲ್ಲಿ ಅಥವಾ ಗುತ್ತಿಗೆ ಪತ್ರಗಳು ಸ್ವೀಕೃತವಾಗದಿದ್ದಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರು ಹೊಣೆಗಾರರಾಗುವುದಿಲ್ಲ.

3. ಕಾಮಗಾರಿಗಾಗಿ ನಿರ್ದಿಷ್ಟಪಡಿಸಿದ ಈ ಕೆಳಗೆ ನಮೂದಿಸಿದ ಮುಂಗಡ ಠೇವಣಿಯನ್ನು ಗುತ್ತಿಗೆ ಪತ್ರಗಳೊಂದಿಗೆ ಸಲ್ಲಿಸತಕ್ಕದು. ಗುತ್ತಿಗೆ ಪತ್ರಗಳಲ್ಲಿ ನಿರ್ದಿಷ್ಟಪಡಿಸಿರುವ ಯಾವುದಾದರೊಂದು ರೂಪದಲ್ಲಿ ಗುತ್ತಿಗೆ ಅರ್ಹತಾ ಅವಧಿಗಿಂತ 45 ದಿನಗಳ ಹೆಚ್ಚುವರಿ ಅವಧಿಯನ್ನು (ಒಟ್ಟಾರೆ 135 ದಿನಗಳ ಅವಧಿ) ಅರ್ಹತಾ ಅವಧಿಯಾಗಿ ಹೊಂದಿರುವ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರು ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಹೆಸರಿನಲ್ಲಿ ಪಡೆದ ಮತ್ತು ಬೆಳಗಾವಿಯಲ್ಲಿ ನಗದೀಕರಣವಾಗುವ ಮುಂಗಡ ಠೇವಣಿಯನ್ನು ಸಲ್ಲಿಸಬೇಕು.

4. ಭರ್ತಿ ಮಾಡಿದ ಗುತ್ತಿಗೆ ಪತ್ರಗಳನ್ನು ದಿನಾಂಕ: 6.04.09ರ ಮಧ್ಯಾಹ್ನ 16.00 ಘಂಟೆಯೊಳಗಾಗಿ (ಕಛೇರಿ ಕಾರ್ಯಾವಧಿಯಲ್ಲಿ) ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಾರ್ಯಾಲಯದಲ್ಲಿ ಸ್ವೀಕರಿಸಲಾಗುವುದು. ಮತ್ತು ಸಾಧ್ಯವಾದಲ್ಲಿ ಅಂದೇ 16.30 ಘಂಟೆಗೆ ಅಥವಾ ಬೇರೆ ಸೂಕ್ತ ದಿನಾಂಕದಂದು ಆಸಕ್ತರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ಗುತ್ತಿಗೆ ಪತ್ರಗಳನ್ನು ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ ಬೆಳಗಾವಿ ಇವರ ಕಾರ್ಯಾಲಯದಲ್ಲಿ ತೆರೆಯಲಾಗುವುದು. ಮೇಲೆ ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ಅಥವಾ ಘೋಷಿತ ರಜಾ ದಿನವಾದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದು.

5. ಇನ್ನುಳಿದ ವಿವರಗಳನ್ನು ಹಾಗೂ ನಿಯಮಗಳನ್ನು ಮಾದರಿ ಗುತ್ತಿಗೆ ದಾಖಲೆ (ಕೆಡಬ್ಲ್ಯೂ–1&2)ದಲ್ಲಿ ವಿವರಿಸಲಾಗಿದ್ದು ಗುತ್ತಿಗೆದಾರರು ನಿಯಮಾವಳಿಗಳನ್ನು ಸಂಪೂರ್ಣ ಅಭ್ಯಸಿಸಿ ಅರ್ಥೈಸಿಕೊಳ್ಳಲು ಸೂಚಿಸಲಾಗಿದೆ.

| ಕ್ರಮ ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡಗಂಟು ಮೊತ್ತ (ರೂ.ಗಳಲ್ಲಿ) | ಟೆಂಡರ್ ಫಾರಂ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿ ಸಲಾಗದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 1. | ಬೆಳಗಾಂವ ಜಿಲ್ಲೆ ರಾಯಬಾಗ ತಾಲೂಕಿನ ಬೊಮ್ಮನಾಳ ಗ್ರಾಮದ ಸಮಗಾರ ತೋಟದ ಹತ್ತಿರ ಫಲಾನುಭವಿಗಳ ಜಮೀನುಗಳಿಗೆ ಏತ ನೀರಾವರಿ ಯೋಜನೆಯ ಪೈಪ್‌ಲೈನ್ ಮೂಲಕ ನೀರೊದಗಿಸುವುದು. | 19.95 | 50,000/– | 2000+Tax | 9 ತಿಂಗಳು (ಮಳೆಗಾಲ ಸೇರಿ) |
| 2. | ಬೆಳಗಾಂವ ಜಿಲ್ಲೆ ರಾಯಬಾಗ ತಾಲೂಕಿನ ಬ್ಯಾಕೂಡ ಗ್ರಾಮದ ಮಾರುತಿ ಸತ್ತೆಪ್ಪಾ ವಡ್ಡರ ತೋಟದ ಹತ್ತಿರ ಫಲಾನುಭವಿಗಳ ಜಮೀನುಗಳಿಗೆ ಏತ ನೀರಾವರಿ ಯೋಜನೆಯ ಪೈಪ್‌ಲೈನ್ ಮೂಲಕ ನೀರೊದಗಿಸುವುದು. | 19.95 | 50,000/– | 2000+Tax | 9 ತಿಂಗಳು (ಮಳೆಗಾಲ ಸೇರಿ) |

| ಕ್ರಮ ಸಂ. | ಕೆಲಸದ ಹೆಸರು | ಟೆಂಡರಿಗಿಟ್ಟ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡಗಂಟು ಮೊತ್ತ (ರೂ.ಗಳಲ್ಲಿ) | ಟೆಂಡರ್ ಫಾರಂ ಬೆಲೆ ರೂ.+ತೆರಿಗೆ ಪ್ರತ್ಯೇಕ ಹಿಂದಿರುಗಿ ಸಲಾಗದು | ಕೆಲಸವನ್ನು ಮುಗಿಸುವ ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 3. | ಬೆಳಗಾಂವ ಜಿಲ್ಲೆ ಗೋಕಾಕ ತಾಲೂಕಿನ ನೆಲಗಂಟಿ ಗ್ರಾಮದ ಹತ್ತಿರ ಇಂಗು ಕೆರೆ ನಿರ್ಮಾಣ | 49.95 | 1,00,000/– | 5000+Tax | 9 ತಿಂಗಳು (ಮಳೆಗಾಲ ಸೇರಿ) |
| 4. | ಬೆಳಗಾಂವ ಜಿಲ್ಲೆ ಗೋಕಾಕ ತಾಲೂಕಿನ ಪಂಜಾನಹಟ್ಟಿ ಗ್ರಾಮದ ಹತ್ತಿರ ಇಂಗು ಕೆರೆ ನಿರ್ಮಾಣ | 49.95 | 1,00,000/– | 5000+Tax | 9 ತಿಂಗಳು (ಮಳೆಗಾಲ ಸೇರಿ) |
| 5. | ಬೆಳಗಾಂವ ಜಿಲ್ಲೆ ರಾಯಬಾಗ ತಾಲೂಕಿನ ಬಿರನಾಳ ಗ್ರಾಮದ ಕಾಂಬಳೆ ತೋಟದ ಹತ್ತಿರ ಹಳ್ಳಕ್ಕೆ (ರಿ.ಸಂ. 49) ರಲ್ಲಿ ಬಾಂಧಾರ ನಿರ್ಮಾಣ | 30.00 | 60,000/– | 3000+ Tax | 6 ತಿಂಗಳು (ಮಳೆಗಾಲ ಸೇರಿ) |
| 6. | ಬೆಳಗಾಂವ ಜಿಲ್ಲೆ ರಾಯಬಾಗ ತಾಲೂಕಿನ ನಿಡಗುಂದಿ ಗ್ರಾಮದ ಕಾಂಬಳೆ ತೋಟದ ಹತ್ತಿರ ಹಳ್ಳಕ್ಕೆ (ರಿ.ಸಂ. 106) ರಲ್ಲಿ ಬಾಂಧಾರ ನಿರ್ಮಾಣ | 30.00 | 60,000/– | 3000+ Tax | 6 ತಿಂಗಳು (ಮಳೆಗಾಲ ಸೇರಿ) |
| 7. | ಬೆಳಗಾವಿ ಜಿಲ್ಲೆ ಹಾಗೂ ತಾಲ್ಲೂಕಿನ ಸಂತಿಬಸ್ತವಾಡ ಹತ್ತಿರ ಮಂಗೋತ್ರಿ ನಾಲಾಕ್ಕೆ ಬಾಂಧಾರ ನಿರ್ಮಾಣ. | 30.00 | 60,000/– | 3000+ Tax | 6 ತಿಂಗಳು (ಮಳೆಗಾಲ ಸೇರಿ) |
| 8. | ಬೆಳಗಾಂವ ಜಿಲ್ಲೆ ಖಾನಾಪೂರ ತಾಲೂಕಿನ ಗಂದಿಗವಾಡ ಬ್ಯಾರೇಜ ಸುಧಾರಣೆ | 19.95 | 50,000/– | 2000+ Tax | 6 ತಿಂಗಳು (ಮಳೆಗಾಲ ಸೇರಿ) |
| 9. | ಬೆಳಗಾಂವ ಜಿಲ್ಲೆ ಬೆಳಗಾವಿ ತಾಲೂಕಿನ ಸೋಹನಟ್ಟಿ ಗ್ರಾಮದಲ್ಲಿ ಗಂಗಾ ಕಲ್ಯಾಣ ಯೋಜನೆ. | 15.00 | 37,500/– | 1500+ Tax | 6 ತಿಂಗಳು (ಮಳೆಗಾಲ ಸೇರಿ) |
| 10. | ಬೆಳಗಾಂವ ಜಿಲ್ಲೆ ಚಿಕ್ಕೋಡಿ ತಾಲೂಕಿನ ಬೆಡಕಿಹಾಳ ಗ್ರಾಮದ ಹತ್ತಿರ ಗಂಗಾ ಕಲ್ಯಾಣ ನೀರಾವರಿ ಯೋಜನೆ | 25.00 | 50,000/– | 2500+ Tax | 6 ತಿಂಗಳು (ಮಳೆಗಾಲ ಸೇರಿ) |
| 11. | ಬೆಳಗಾಂವ ಜಿಲ್ಲೆ ಚಿಕ್ಕೋಡಿ ತಾಲೂಕಿನ ಸೌಂದಲಗಾ ಗ್ರಾಮದ ಜಮೀನುಗಳಿಗೆ ಪೈಪ್‌ಲೈನ್ ಮೂಲಕ ಏತ ನೀರಾವರಿ ಯೋಜನೆ | 25.00 | 50,000/– | 2500+ Tax | 6 ತಿಂಗಳು (ಮಳೆಗಾಲ ಸೇರಿ) |

**ಎಸ್.ಎಮ್. ಮನಗೂಳಿ**

ಪಿ.ಆರ್. 225 ಕಾರ್ಯನಿರ್ವಾಹಕ ಇಂಜಿನೀಯರರು, ಸಣ್ಣ ನೀರಾವರಿ ವಿಭಾಗ, ಬೆಳಗಾವಿ

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಸಣ್ಣ ನೀರಾವರಿ ವಿಭಾಗ ಬೆಳಗಾವಿ.**

**ಅವಧಿ ವಿಸ್ತರಣೆ**

**(ಸ್ಟಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯೂ–3ರ ಅನ್ವಯ ಗುತ್ತಿಗೆ ಆಹ್ವಾನ)**

**ಕ್ರ.ಸಂ.ಸನೀ.ವಿ.ಬೆಳಗಾವಿ/ಕಿ.ಇಂ./ಟೆಂಡರ್/2008–09/706, ದಿನಾಂಕ: 21ನೇ ಫೆಬ್ರವರಿ 2009**

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂ.ಸನೀ.ವಿ.ಬೆಳಗಾವಿ/ಕಿ.ಇಂ./ಟೆಂಡರ್/2008–09/172 ದಿನಾಂಕ: 15.01.09ರಲ್ಲಿ ಆಹ್ವಾನಿಸಲಾದ ಕೆಳಗಿನ ಕಾಮಗಾರಿಗಳ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

| ಕ್ರಮ ಸಂ. | ಕೆಲಸದ ಹೆಸರು |
|---|---|
| 1. | ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಅಜೂರ ಗ್ರಾಮದ ಹತ್ತಿರ ಹಳ್ಳಕ್ಕೆ ಬ್ಯಾರೇಜ್ ನಿರ್ಮಾಣ |
| 2. | ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಅನಂತಪೂರ ಹತ್ತಿರ ಜೀರಗ್ಯಾನ ಹಳ್ಳಕ್ಕೆ ಇಂಗು ಕೆರೆ ನಿರ್ಮಾಣ. |
| 3. | ಬೆಳಗಾವಿ ಜಿಲ್ಲೆಯ ಬೆಳಗಾವಿ ತಾಲ್ಲೂಕಿನ ಸಾವಗಾಂವ ಸ.ನೀ.ಕೆರೆ ಸುಧಾರಣೆ. |
| 4. | ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಹೀರೇಕೋಡಿ ಹಳ್ಳಕ್ಕೆ ಹೀರೇಕೋಡಿ–ಮಿರಜಾನಕೋಡಿ ನಡುವೆ ಬಿಜ್ರ್–ಕಂ–ಬ್ಯಾರೇಜ್ ನಿರ್ಮಾಣ. |
| 5. | ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಆನೆಗುದ್ದಿ ಹತ್ತಿರ ಇಂಗು ಕೆರೆ ನಿರ್ಮಾಣ. |

1. ಖುಲ್ಲಾ ಟೆಂಡರ್ ಫಾರಂಗಳನ್ನು ಖರೀದಿಸುವ ದಿನಾಂಕ: 20.03.09 ರಿಂದ 24.3.09
2. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ:30.03.09

(ಸಾಧ್ಯವಾದಲ್ಲಿ ಅಂದೇ ಸಂಜೆ 16.30 ಗಂಟೆಗೆ ಟೆಂಡರ್‌ಗಳನ್ನು ತೆರೆಯಲಾಗುವುದು) ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ಎನ್.ಎಮ್. ಮನಗೂಳಿ**
ಕಾರ್ಯನಿರ್ವಾಹಕ ಇಂಜಿನೀಯರರು,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ

ಪಿ.ಆರ್. 226

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**
**ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಸಣ್ಣ ನೀರಾವರಿ ವಿಭಾಗ ಬೆಳಗಾವಿ.**
**ಅವಧಿ ವಿಸ್ತರಣೆ**
**(ಸ್ಟಾಂಡರ್ಡ್ ಟೆಂಡರ್ ಡಾಕ್ಯೂಮೆಂಟ್ ಕೆಡಬ್ಲ್ಯೂ–3ರ ಅನ್ವಯ ಗುತ್ತಿಗೆ ಆಹ್ವಾನ)**
**ಕ್ರ.ಸಂ.ಸನೀ.ವಿ.ಬೆಳಗಾವಿ/ಕಿ.ಇಂ./ಟೆಂಡರ್/2008–09/707, ದಿನಾಂಕ: 21ನೇ ಫೆಬ್ರವರಿ 2009**

ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂ.ಸನೀ.ವಿ.ಬೆಳಗಾವಿ/ಕಿ.ಇಂ./ಟೆಂಡರ್/2008–09/174 ದಿನಾಂಕ: 15.01.09ರಲ್ಲಿ ಆಹ್ವಾನಿಸಲಾದ ಟೆಂಡರಿನ ದಿನಾಂಕಗಳನ್ನು ಈ ಕೆಳಗಿನಂತೆ ಮುಂದೂಡಲಾಗಿದೆ.

| ಕ್ರಮ ಸಂ. | ಕೆಲಸದ ಹೆಸರು |
|---|---|
| 1. | ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಬೂದಿಹಾಳ ಹತ್ತಿರ ಚಿಕೋತ್ರಾ ನದಿಗೆ ಅಡ್ಡಲಾಗಿ ಬ್ರಿಜ್–ಕಂ–ಬ್ಯಾರೇಜ್ ನಿರ್ಮಾಣ |

1. ಖುಲ್ಲಾ ಟೆಂಡರ್ ಫಾರಂಗಳನ್ನು ಖರೀದಿಸುವ ದಿನಾಂಕ: 20.03.09 ರಿಂದ 24.3.09
2. ಪೂರ್ವ ಟೆಂಡರ್ ಸಭೆಯ ದಿನಾಂಕ: 26.3.09
3. ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: 30.03.09

(ಸಾಧ್ಯವಾದಲ್ಲಿ ಅಂದೇ ಸಂಜೆ 16.30 ಗಂಟೆಗೆ ಟೆಂಡರ್‌ಗಳನ್ನು ತೆರೆಯಲಾಗುವುದು) ಬಾಕಿ ಉಪವಿಧಿಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ಎನ್.ಎಮ್. ಮನಗೂಳಿ**
ಕಾರ್ಯನಿರ್ವಾಹಕ ಇಂಜಿನೀಯರರು,
ಸಣ್ಣ ನೀರಾವರಿ ವಿಭಾಗ, ಬೆಳಗಾವಿ

**WATER RESOURCES DEPARTMENT (MINOR IRRIGATION)**
**M.I.DIVISION, BELGAUM**
**Time Extension**
**(As per Standard Tender Document KW-4)**
**IFT No.EE /MID/BGM/TND/JE/08-09/707, Dated: 21st February 2009**

The dates of the tender called for by this office for the below mentioned works vide T.O.IFT.No. EE/MID/BGM/TND/JE/08-09/174 Date:15.01.2009 are extended as below.

| Sl. No. | Name of Work |
|---|---|
| 1 | Construction of BCB across Chikotra river near Budihal Village Tq. Chikkodi Dist., Belgaum. |

1. Tender documents may be purchased from : 20.03.09 to 24.03.09
2. Date of Pre-tender meeting : 26.03.09
3. Date of Receipt of tender : 30.03.09 upto 16.00 hrs.

(The tender shall be opened (if possible) the next day @ 16.00 hrs)
Remaining conditions remain unchanged.

**N.M. MANAGOLI**
Executive Engineer,
M.I.Division, Belgaum.

P.R. 227

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
## ಟೆಂಡರ್ ಅಧಿಸೂಚನೆ

**ಸಂಖ್ಯೆ: ಸಿಆಸುಇ 57 ಡಿಟಿಎನ್ 2009, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2009**

ಮಾನ್ಯ ಮುಖ್ಯ ಮಂತ್ರಿಯವರ ಅಧಿಕೃತ ನಿವಾಸ ಸಂಖ್ಯೆ:2, ಕಾಟೇಜಸ್, ರೇಸ್ ಕೋರ್ಸ್ ರಸ್ತೆ, ಬೆಂಗಳೂರು, ಇಲ್ಲಿಗೆ ನೂತನ ಮಾದರಿಯ ಡಿಜಿಟಲ್ ಪ್ಯಾನಾಸೋನಿಕ್ ಕೀ ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು ಖರೀದಿಸಿ ಅಳವಡಿಸಲು ಉದ್ದೇಶಿಸಲಾಗಿದ್ದು, ಈ ಸಂಬಂಧ ಅಧಿಕೃತ ಸರಬರಾಜುದಾರರು ಮತ್ತು ಪ್ರಸಿದ್ಧ ಸಂಸ್ಥೆಗಳಿಂದ ಟೆಂಡರ್‌ನ್ನು ಕರೆಯಲಾಗಿದೆ.

ಮಾನ್ಯ ಮುಖ್ಯ ಮಂತ್ರಿಯವರ ಅಧಿಕೃತ ನಿವಾಸಕ್ಕೆ ಅಳವಡಿಸಬೇಕಾಗಿರುವ ಅತ್ಯಾಧುನಿಕ ಮಾದರಿಯ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಯ ಉಪಕರಣಗಳ ವಿವರಗಳು:–

| ಕ್ರಮ ಸಂಖ್ಯೆ | ಉಪಕರಣಗಳ ಮಾದರಿ | ಉಪಕರಣಗಳ ಸಂಖ್ಯೆ |
|---|---|---|
| 1 | ಕೆಎಕ್ಸ್–ಟಿಡಿಎ 100 ಡಿಜಿಟಲ್ ಐಪಿ–ಪಿಬಿಎಕ್ಸ್ ಆಧುನಿಕ ಮಾದರಿಯ ಪ್ಯಾನಾಸೋನಿಕ್ ಸಂಪರ್ಕ ವ್ಯವಸ್ಥೆಯ ಮುಖ್ಯ ಉಪಕರಣ<br>8 ಟ್ರಂಕ್ ಲೈನ್ ಕಾರ್ಡ್<br>16 ಡಿಜಿಟಲ್ ಎಕ್ಸ್‌ಟೆನ್‌ಷನ್<br>16 ಅನಾಲಾಗ್ ಎಕ್ಸ್‌ಟೆನ್‌ಷನ್ | 1 |
| 2 | ಕಾಲರ್ ಐಡಿ ಇರುವ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಉಪಕರಣಗಳು | 16 |
| 3 | ಪುಶ್ ಬಟನ್ ದೂರವಾಣಿ ಉಪಕರಣಗಳು | 10 |
| 4 | ಯುಪಿಎಸ್ | 01 |
| 5 | ಕೇಬಲ್ (ಕೇಸಿಂಗ್ ಜೊತೆಗೆ) ಅಳವಡಿಕೆಗೆ ತಗಲುವ ವೆಚ್ಚ | |

**ಟೆಂಡರ್‌ನ ಷರತ್ತುಗಳು ಈ ಕೆಳಕಂಡಂತಿವೆ:–**

1) ಮೊಹರು ಮಾಡಿದ ಅಲ್ಪಾವಧಿ ಟೆಂಡರ್ ಕವರಿನ ಮೇಲೆ **"ಕೀ ಟೆಲಿಫೋನ್ ಸಂಪರ್ಕ ವ್ಯವಸ್ಥೆಯ ಟೆಂಡರ್"** ಎಂದು ಬರೆದಿರತಕ್ಕದ್ದು.
2) ಟೆಂಡರ್‌ನೊಂದಿಗೆ ರೂ. 5,000–00 ಮುಂಗಡ ಹಣ ಮೊತ್ತಕ್ಕೆ (ಇಎಂಡಿ) ಬ್ಯಾಂಕ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು–1, ಇವರಿಗೆ ಸಂಬೋಧಿಸಿ ಕಳುಹಿಸತಕ್ಕದ್ದು.
3) ರೂ.5,000–00ಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರನ್ನು ತಿರಸ್ಕರಿಸಲಾಗುವುದು.
4) ಟೆಂಡರ್‌ನ್ನು **ದಿನಾಂಕ: 26–03–2009ರ 3–00** ಗಂಟೆಯೊಳಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆ:23, ವಿಧಾನಸೌಧ, ಬೆಂಗಳೂರು–1, ಇವರಿಗೆ ಸಲ್ಲಿಸತಕ್ಕದ್ದು.
5) ಟೆಂಡರ್‌ನ್ನು **ದಿನಾಂಕ:30–03–2009ರ ಮಧ್ಯಾಹ್ನ 4–00** ಗಂಟೆಗೆ ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ವಿಧಾನಸೌಧ, ಬೆಂಗಳೂರು ಇವರ ಕೊಠಡಿಯಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
6) ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾಗಿದ್ದಲ್ಲಿ ನಂತರದ ಕೆಲಸದ ದಿನದಂದು ಅದೇ ಸಮಯ ಹಾಗೂ ಅದೇ ಸ್ಥಳದಲ್ಲಿ ಟೆಂಡರ್‌ನ್ನು ತೆರೆಯಲಾಗುವುದು.
7) ಭದ್ರತಾ ಠೇವಣಿ ಮೊತ್ತ ರೂ. 5,000–00ನ್ನು ಯಶಸ್ವಿ ಟೆಂಡರ್‌ದಾರರ ಅಂತಿಮ ಬಿಲ್ಲಿನಲ್ಲಿ ಹೊಂದಾಣಿಕೆ ಮಾಡಿ ಸರಿದೂಗಿಸಲಾಗುವುದು. ಅಯಶಸ್ವಿ ಟೆಂಡರ್‌ದಾರರ ಡಿ.ಡಿ.ಗಳನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು.
8) ಟೆಂಡರ್‌ನೊಂದಿಗೆ ದಿನಾಂಕ:31–03–2008ಕ್ಕೆ ಅನ್ವಯಿಸುವ ಆದಾಯತೆರಿಗೆ ಮತ್ತು ಮಾರಾಟ ತೆರಿಗೆ ಪಾವತಿ ಮಾಡಿರುವ ಸರ್ಟಿಫಿಕೇಟ್‌ಗಳನ್ನು ಸಲ್ಲಿಸತಕ್ಕದ್ದು.
9) ಹೊಸದಾಗಿ ಅಳವಡಿಸಿರುವ ಕೀ ಟೆಲಿಫೋನ್ ಸಂಪರ್ಕ ವ್ಯವಸ್ಥೆಗೆ ಸಂಬಂಧಪಟ್ಟಂತೆ ಯಾವುದೇ ಬಿಡಿ ಭಾಗಗಳು ಮತ್ತು ದುರಸ್ಥಿಯ ವೆಚ್ಚವನ್ನು ಈ ಸಂಪರ್ಕ ವ್ಯವಸ್ಥೆಯನ್ನು ಅಳವಡಿಸುವ ದಿನಾಂಕದಿಂದ 1 (ಒಂದು) ವರ್ಷದ ಅವಧಿಗೆ ಭರಿಸುವ ಜವಾಬ್ದಾರಿ ಉಪಕರಣ ಅಳವಡಿಸಿರುವ ಸಂಸ್ಥೆಯದ್ದಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್. ಮಂಜುನಾಥ್**

ಪಿ.ಆರ್. 211

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

**ಕಂದಾಯ ಇಲಾಖೆ**

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಹಾವೇರಿ**

**ಅಧಿಸೂಚನೆ**

**ನಂ: ಸಿಬ್ಬಂದಿ(1) ವಹಿ–100: 2008–09, ಹಾವೇರಿ, ದಿನಾಂಕ: 27ನೇ ಫೆಬ್ರವರಿ 2009**

**ವಿಷಯ:** ಹಾವೇರಿ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ನಂ:ಆರ್‌ಡಿ: 299: ಬಿಎಸ್‌ಸಿ: 2006: ದಿನಾಂಕ: 3–2–2009.

ಹಾವೇರಿ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡುವ ಕುರಿತು ಅರ್ಹ ಅಭ್ಯರ್ಥಿಗಳಿಂದ ಈ ಕೆಳಗಿನ ಷರತ್ತುಗಳಿಗೆ ಒಳಪಟ್ಟು ಅರ್ಜಿಗಳನ್ನು ಆಹ್ವಾನಿಸಲಾಗಿದೆ.

1. **ಹುದ್ದೆಗಳ ವಿವರ ಮತ್ತು ವೇತನ ಶ್ರೇಣಿ:**

**ಹುದ್ದೆಗಳ ಹೆಸರು** : **ಸಂಖ್ಯೆ**

(ಅ) ಗ್ರಾಮಲೆಕ್ಕಾಧಿಕಾರಿ. : 68

(ಬ) ವೇತನ ಶ್ರೇಣಿ : 5800–100–6000–125–6500–150–7100–175–7800–200–8600–
: 225–9500–250–10500

2. **ಹುದ್ದೆಯ ವರ್ಗೀಕರಣ:**

| ಕ್ರ. ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವರ್ಗೀಕರಣ | | | | | | | | |
|---|---|---|---|---|---|---|---|---|---|---|---|
| | | | ಪ್ರವರ್ಗ | ಇತರೆ | ಮಹಿಳಾ | ಗ್ರಾಮೀಣ | ಮಾ. ಸೈ | ಕ.ಮಾ ಅ | ಯೋ ನಿರಾ | ಅಂ. ವಿ. | ಒಟ್ಟು |
| 1. | ಗ್ರಾಮಲೆಕ್ಕಾಧಿಕಾರಿ. | 68 | ಪ.ಜಾ | 3 | 3 | 3 | 1 | 0 | 0 | 1 | 11 |
| | | | ಪ.ಪಂ | 1 | 1 | 0 | 0 | 0 | 0 | 0 | 2 |
| | | | ಪ್ರ–1 | 1 | 1 | 1 | 0 | 0 | 0 | 0 | 3 |
| | | | ಪ್ರ–2(ಎ) | 2 | 3 | 3 | 1 | 0 | 0 | 1 | 10 |
| | | | ಪ್ರ–2(ಬಿ) | 1 | 1 | 1 | 0 | 0 | 0 | 0 | 3 |
| | | | ಪ್ರ–3(ಎ) | 1 | 1 | 0 | 0 | 0 | 0 | 0 | 2 |
| | | | ಪ್ರ–3(ಬಿ) | 1 | 1 | 1 | 0 | 0 | 0 | 0 | 3 |
| | | | ಸಾ.ಅ | 7 | 10 | 9 | 3 | 2 | 1 | 2 | 34 |
| | | ಹುದ್ದೆಗಳ ವರ್ಗೀಕರಣದ ರೋಸ್ಟರಿನ ಪ್ರಾರಂಭಿಕ ಬಿಂದು:1 | | | | | | | | | |

(1) ಮಾ.ಸೈ–ಮಾಜಿ ಸೈನಿಕರು (2) ಕ.ಮಾ.ಅ–ಕನ್ನಡ ಮಾಧ್ಯಮ ಅಭ್ಯರ್ಥಿ (3) ಯೋ.ನಿರಾ–ಯೋಜನಾ ನಿರಾಶ್ರಿತರು (4) ಅಂ.ವಿ–ಅಂಗವಿಕಲರು.

3. **ವಿದ್ಯಾರ್ಹತೆ:** ಕರ್ನಾಟಕ ಪದವಿಪೂರ್ವ ಶಿಕ್ಷಣ ಇಲಾಖೆಯಿಂದ ನಡೆಸುವ P.U.C. ಪರೀಕ್ಷೆಯಲ್ಲಿ ತೇರ್ಗಡೆ ಅಥವಾ ಯಾವುದೇ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು.

4. **ವಯೋಮಿತಿ:** ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಈ ಕೆಳಗಿನಂತೆ ವಯೋಮಿತಿ ಹೊಂದಿರತಕ್ಕದ್ದು.

(1) ಪ.ಜಾ/ ಪ.ಪಂ/ ಪ್ರ ವರ್ಗ–1 : ಕನಿಷ್ಟ 18, ಗರಿಷ್ಟ 40 ವರ್ಷ

(2) ಹಿಂದುಳಿದ ವರ್ಗ : ಕನಿಷ್ಟ18, ಗರಿಷ್ಟ 38 ವರ್ಷ

(3) ಸಾಮಾನ್ಯ ವರ್ಗ. : ಕನಿಷ್ಟ 18, ಗರಿಷ್ಟ 35 ವರ್ಷ

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಟ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

(ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು, ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಟ ವಯೋಮಿತಿಯನ್ನು ಅವನು/ ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
(ಇ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು.
(ಈ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.

5. **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ : 30–3–2009**

6. **ಅರ್ಜಿ ಶುಲ್ಕ:** ಪರಿಶಿಷ್ಟ ಜಾತಿ/ ಪಂಗಡದ/ ಪ್ರವರ್ಗ–1 ಅಭ್ಯರ್ಥಿಗಳಿಗೆ ರೂ. 100–00 ಇತರರಿಗೆ ರೂ.300–00 ಗಳಿಗೆ ಬ್ಯಾಂಕ್ ಡಿ.ಡಿ.ಯನ್ನು ಅಧ್ಯಕ್ಷರು, ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು ಹಾವೇರಿ–581110 ರವರ ಹೆಸರಿಗೆ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಪಡೆದು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಡಿ.ಡಿ.ಹಿಂದೆ ಹೆಸರು, ವಿಳಾಸ ನಮೂದಿಸತಕ್ಕದ್ದು. ಡಿ.ಡಿ. ಲಗತ್ತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವದು.

7. **ಆಯ್ಕೆ ವಿಧಾನ:** ಅಭ್ಯರ್ಥಿಗಳ ಆಯ್ಕೆಯನ್ನು ಕರ್ನಾಟಕ ಸಾಮಾನ್ಯ ಸೇವೆಗಳು (ರೆವಿನ್ಯೂ ಸಬಾರ್ಡಿನೇಟ್ ಬ್ರ್ಯಾಂಚ್) (ವೃಂದ ಮತ್ತು ನೇಮಕಾತಿ (ತಿದ್ದುಪಡಿ) ನಿಯಮಗಳು 2008 ರನ್ವಯ ಅರ್ಹತೆ (ಮೆರಿಟ್) ಆಧಾರದ ಮೇಲೆ ಆಯ್ಕೆಗೆ ಪರಿಗಣಿಸಲಾಗುವದು.

8. **ಅರ್ಜಿ ನಮೂನೆ ಮತ್ತು ಅರ್ಜಿ ಸಲ್ಲಿಸುವ ವಿಳಾಸ:** ಅಭ್ಯರ್ಥಿಗಳು ನಿಗಧಿತ ನಮೂನೆಯಲ್ಲಿ ಮಾತ್ರ ಅರ್ಜಿಯನ್ನು ಸಲ್ಲಿಸಬೇಕು. ಅರ್ಜಿಯನ್ನು ಹಾವೇರಿ ಜಿಲ್ಲೆಯ ವೆಬ್‌ಸೈಟ್ http:// haveri.nic.in ಯಿಂದ Download ಮಾಡಿಕೊಂಡು, ಈ ಕೆಳಕಂಡ ಎಲ್ಲ ದಾಖಲೆಗಳ ಧೃಡೀಕೃತ ಪ್ರಮಾಣ ಪತ್ರಗಳ ಪ್ರತಿಗಳೊಂದಿಗೆ ಎಲ್ಲಾ ಮಾಹಿತಿಯನ್ನು ಅರ್ಜಿದಾರರು ಭರ್ತಿ ಮಾಡಿ, ಲಕೋಟೆಯ ಮೇಲ್ಭಾಗದಲ್ಲಿ **"ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಾಗಿ ಅರ್ಜಿ"** ಎಂದು ದಪ್ಪ ಅಕ್ಷರಗಳಲ್ಲಿ ಬರೆದು, **ಅಧ್ಯಕ್ಷರು, ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು ಹಾವೇರಿ** ಇವರಿಗೆ ಅಂಚೆ ಮೂಲಕ ಅಥವಾ ನೇರವಾಗಿ ನಿಗಧಿಪಡಿಸಿದ ದಿನಾಂಕದೊಳಗಾಗಿ ಕಾರ್ಯಾಲಯದ ವೇಳೆಯಲ್ಲಿ ತಲುಪುವಂತೆ ಸಲ್ಲಿಸಬೇಕು. ಅರ್ಜಿಗಳನ್ನು ಜಿಲ್ಲಾಧಿಕಾರಿಗಳ ಕಾರ್ಯಾಲಯದಿಂದ ಪೂರೈಸಲಾಗುವದಿಲ್ಲ.

1. ಹುದ್ದೆಗಳಿಗೆ ನಿಗಧಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ/ ಸೆಮಿಸ್ಟರ್‌ಗಳ ಅಂಕಪಟ್ಟಿ ಹಾಗೂ ಪ್ರಮಾಣ ಪತ್ರಗಳು.
2. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ ವರ್ಗಾವಣೆಯ ಪ್ರಮಾಣ ಪತ್ರ/ ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉಧೃತ ಭಾಗ.
3. ಸೈನಿಕ ಸೇವೆಯಿಂದ ಬಿಡುಗಡೆಯಾದ/ ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)
4. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಗಳ ಪ್ರಮಾಣ ಪತ್ರಗಳು (ಮೀಸಲಾತಿ ಕೋರಿದ್ದಲ್ಲಿ)
5. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು ನಮೂನೆ–2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
6. ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
7. ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
8. ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
9. ವಿಧವೆಯಾದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

9. **ವಿಶೇಷ ಸೂಚನೆಗಳು:**

1. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.
2. ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಸೈಜಿನ ಭಾವಚಿತ್ರ ಅಂಟಿಸಬೇಕು
3. ಪ್ರಮಾಣ ಪತ್ರಗಳನ್ನು ಲಗತ್ತಿಸದಿರುವ ಅರ್ಜಿಗಳನ್ನು ಹಾಗೂ ಅಪೂರ್ಣವಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
4. ಈ ಅಧಿಸೂಚನೆಯನ್ವಯ ಅಭ್ಯರ್ಥಿಗಳು ಆಯ್ಕೆಯಾದಲ್ಲಿ ಅಂಥವರು ಹಾವೇರಿ ಜಿಲ್ಲೆಯ ಯಾವುದೇ ತಾಲೂಕಿನಲ್ಲಿ ಸೇವೆ ಸಲ್ಲಿಸಲು ಬದ್ಧರಾಗಿರಬೇಕು.
5. ಅಭ್ಯರ್ಥಿಗಳು ಆಯ್ಕೆ ಬಗ್ಗೆ ಶಿಫಾರಸ್ಸುಗಳನ್ನು ಮಾಡಿದರೆ ಅಂಥವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
6. ಪ್ರಕಟಿಸಿರುವ ಹುದ್ದೆಗಳನ್ನು ಹೆಚ್ಚು ಅಥವಾ ಕಡಿಮೆ ಮಾಡುವ ಹಕ್ಕು ಆಯ್ಕೆ ಪ್ರಾಧಿಕಾರಿಗಳಿಗೆ ದತ್ತವಾಗಿರುತ್ತದೆ.
7. ಆಯ್ಕೆ ಪ್ರಾಧಿಕಾರವು ಗ್ರಾಮಲೆಕ್ಕಿಗರ ಹುದ್ದೆಗಳ ಭರ್ತಿ ಮಾಡುವ ವಿಚಾರ ಕುರಿತು ಪೂರ್ಣ ಅಧಿಕಾರವನ್ನು ಕಾಯ್ದಿರಿಸಿಕೊಂಡಿದೆ.
8. ಮೇಲಿನ ಹುದ್ದೆಗಳಿಗೆ ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ಆಯ್ಕೆ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿಗಳು ಹಾವೇರಿ ಇವರು ಕಾಯ್ದಿರಿಸಿಕೊಂಡಿದ್ದಾರೆ.
9. ನಿಗದಿತ ದಿನಾಂಕದ ನಂತರ ಸಲ್ಲಿಸಿದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

19. **ಅಂಗವಿಕಲ ಕುಟುಂಬದ ಅಭ್ಯರ್ಥಿಗಳು :**

ಅಂಗವಿಕಲ ಅಭ್ಯರ್ಥಿ ಎಂದರೆ, ಸರ್ಕಾರದ ಆದೇಶ ಸಂ.ಡಿಪಿಎಆರ್ 52 ಎಸ್‌ಆರ್‌ಆರ್ 99 ದಿ: 29.11.2002ರಂತೆ

(ಎ) ಕುಷ್ಠರೋಗ ನಿವಾರಿತರು

(ಬಿ) ಶ್ರವಣ ದೋಷ ಉಳ್ಳವರು ಅಂದರೆ 70 ಡೆಸಿಬಲ್ಸ್ ಮತ್ತು ಅದಕ್ಕಿಂತ ಹೆಚ್ಚು

(ಸಿ) ಮೂಳೆಗಳು, ಮಾಂಸಖಂಡಗಳು ಮತ್ತು ಕೀಲುಗಳು ವಾಡಿಕೆಯ ಕಾರ್ಯನಿರ್ವಹಣೆಗೆ ಅಡಚಣೆಯಾಗುವಂತಹ ದೈಹಿಕ ದೋಷ ಅಥವಾ ವಿಕಲತೆ ಹೊಂದಿರುವ ವ್ಯಕ್ತಿಗಳು ಅರ್ಹರಾಗಿರುವುದಿಲ್ಲ.

(ಡಿ) ರಾಜ್ಯದ ಸರ್ಕಾರಿ ಜಿಲ್ಲಾ ಮತ್ತು ತಾಲ್ಲೂಕು ಆಸ್ಪತ್ರೆಗಳಲ್ಲಿರುವ ವೈದ್ಯರು ಅಂಗವಿಕಲರಿಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡಲು ಅಧಿಕಾರ ಹೊಂದಿದವರಾಗಿರುತ್ತಾರೆ.

ಸರ್ಕಾರದ ಆದೇಶ ಸಂ. ಡಿಪಿಎಆರ್ 07 ಸೇಸ್ಥೆಅ 94 ದಿನಾಂಕ: 13.9.95 ರಲ್ಲಿ ನಿಗದಿಪಡಿಸಿರುವ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು. ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

**20. ಗ್ರಾಮೀಣ ಅಭ್ಯರ್ಥಿಗಳು :**

ಗ್ರಾಮೀಣ ಅಭ್ಯರ್ಥಿ ಎಂದರೆ, ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ದೃಢೀಕೃತ ಗ್ರಾಮೀಣ ಪತ್ರವನ್ನು ಲಗತ್ತಿಸತಕ್ಕದ್ದು. ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ರ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದು ಅದರ ಒಂದೊಂದು ಫೋಟೋ ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2 ಬಿ, 3ಎ, 3 ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2 ರಲ್ಲಿ ನಿಗಧಿತ ಪ್ರಾಧಿಕಾರಿಗಳಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮತ್ತು ಮೊಹರು ಮಾಡಿಸಿಕೊಂಡು ಅದರ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.

**21. ಕನ್ನಡ ಮಾಧ್ಯಮ ಅಭ್ಯರ್ಥಿಗಳು:**

ಸರ್ಕಾರದ ಅಧಿಸೂಚನೆ ಸಂ. ಖಿಪಿಎಆರ್ 71 ಎಸ್‌ಆರ್‌ಆರ್ 2001 ದಿ: 24.10.2002ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು

1977ರ ನಿಯಮ (9) (1) (ಸಿ) ರನ್ವಯ ಅಭ್ಯರ್ಥಿಯು 1 ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

22. **ಅರ್ಹತಾ ಷರತ್ತುಗಳು :**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನ್ಯತೆಯಿಂದ ಮುಕ್ತರಾಗಿರಬೇಕು.

ಇ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗಧಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

23. **ಕೆಳಕಂಡ ದಾಖಲೆಗಳನ್ನು ಅರ್ಜಿಯ ಜೊತೆಗೆ ಲಗತ್ತಿಸಿದೆಯೇ ಎಂದು ಖಚಿತಪಡಿಸಿಕೊಳ್ಳುವುದು.**

*. ಹುದ್ದೆಗಳಿಗೆ ನಿಗಧಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ / ಪ್ರಮಾಣ ಪತ್ರ ಮತ್ತು ಕಂಪ್ಯೂಟರ್ ಜ್ಞಾನದ ಬಗ್ಗೆ ದಾಖಲೆ

* ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉಧೃತ ಭಾಗ

* ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಮೀಸಲಾತಿ ಕೋರಿದ್ದಲ್ಲಿ)

* ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಗಳ ಪ್ರಮಾಣ ಪತ್ರಗಳು (ಮೀಸಲಾತಿ ಕೋರಿದ್ದಲ್ಲಿ)
* ಗ್ರಾಮೀಣ ಮೀಸಲಾತಿ ಪ್ರಮಾಣಪತ್ರ ನಮೂನೆ–1 ರಲ್ಲಿ 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
* ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
* ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
* ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
* ವಿಧವೆಯಾದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ

**ಮೇಲ್ಕಂಡಂತೆ ನಿಗದಿಪಡಿಸಿದ ದಾಖಲೆಗಳನ್ನು ಸಲ್ಲಿಸದಿದ್ದಲ್ಲಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

**24. ಇತರೆ ಸೂಚನೆಗಳು :**

1) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.

2) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ**

**ಗ್ರಾಮ ಲೆಕ್ಕಿಗರ ನೇರ ನೇಮಕಾತಿಗಾಗಿ ಅರ್ಜಿ ನಮೂನೆ**



**ಅಧ್ಯಕ್ಷರು, ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ**
**ಹಾಗೂ ಜಿಲ್ಲಾಧಿಕಾರಿಗಳು,**
ರೈತ ಭವನ, ಪಿ.ಬಿ. ರಸ್ತೆ,
ಕೆಎಸ್‌ಆರ್‌ಟಿಸಿ ಎದುರು,
ದಾವಣಗೆರೆ ಜಿಲ್ಲೆ.
ಪ್ರಕಟಣೆ ಸಂಖ್ಯೆ :
ಜಾಹೀರಾತು ಹೊರಡಿಸಿದ ದಿನಾಂಕ:
ಅರ್ಜಿ ಸಲ್ಲಿಸುತ್ತಿರುವ ಹುದ್ದೆಯ ಹೆಸರು :

| ಡಿ.ಡಿ. ಪಡೆದ ಬ್ಯಾಂಕ್ ಹೆಸರು | ಸಂದಾಯ ಮಾಡಿದ ಮೊತ್ತ | ಡಿ.ಡಿ. ಸಂಖ್ಯೆ ಮತ್ತು ದಿನಾಂಕ |
|---|---|---|
| | | |

| | | |
|---|---|---|
| 1 | ಅರ್ಜಿದಾರನ/ಳ ಪೂರ್ಣ ಹೆಸರು | |
| 2 | ತಂದೆ / ಪೋಷಕರ ಹೆಸರು | |
| 3 | ಖಾಯಂ ವಿಳಾಸ | |
| 4 | ಅಂಚೆ ವಿಳಾಸ | |
| 5 | ಸಂಪರ್ಕಿಸಬಹುದಾದ ದೂರವಾಣಿ ಸಂಖ್ಯೆ | |
| 6 | ಲಿಂಗ : ಪುರುಷ / ಮಹಿಳೆ | |
| 7 | ಜನ್ಮ ದಿನಾಂಕ(ಎಸ್.ಎಸ್.ಎಲ್.ಸಿ. ಅಂಕ ಪಟ್ಟಿಯಲ್ಲಿರುವಂತೆ) | |

| | | | | | | | |
|---|---|---|---|---|---|---|---|
| 8 | ಮೀಸಲಾತಿ ಕೋರಿದ್ದಲ್ಲಿ ಅನ್ವಯಿಸುವ ಬಾಕ್ಸ್‌ನಲ್ಲಿ ☑ ಗುರುತು ಹಾಕಿ (ದೃಢೀಕರಣ ಪತ್ರಗಳನ್ನು ಕಡ್ಡಾಯವಾಗಿ ಲಗತ್ತಿಸಬೇಕು) | | | | | | |
| | ಅ. ಪ.ಜಾ / ಪ.ಪಂ.ದವರೇ | ಪ.ಜಾತಿ | ಪ.ಪಂಗಡ | ಉಪಜಾತಿ ನಮೂದಿಸಬೇಕು | | | |
| | ಆ. ಹಿಂದುಳಿದ ವರ್ಗದವರೇ | ಪ್ರ–1 | 2ಎ | 2ಬಿ | 3ಎ | 3ಬಿ | ಉಪಜಾತಿ ನಮೂದಿಸಬೇಕು |
| | ಇ.ಸಾಮಾನ್ಯ ವರ್ಗದವರೇ | ಹೌದು | ಇಲ್ಲ | | | | |
| | ಈ. ಇತರೆ ಮೀಸಲಾತಿ | ಗ್ರಾಮೀಣ | ಕ.ಮಾ.ಅ. | ಅಂ.ವಿ. | ಯೋ.ನಿರಾ | ಮಾ.ಸೈ. | |
| 9 | ವಿದ್ಯಾರ್ಹತೆ | **ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆ** | | | | | |
| | | **ಒಟ್ಟು ಅಂಕಗಳು** | **ಗಳಿಸಿದ ಅಂಕಗಳು** | **ಶೇಕಡ** | | | |
| 10 | ಕಂಪ್ಯೂಟರ್ ಜ್ಞಾನದ ಬಗ್ಗೆ ಮಾಹಿತಿ (ಎಂ.ಎಸ್.ವರ್ಡ್, ಎಂ.ಎಸ್.ಎಕ್ಸೆಲ್, ಪವರ್ ಪಾಯಿಂಟ್, ಸ್ಕ್ಯಾನಿಂಗ್, ನುಡಿ ಕನ್ನಡ ತಂತ್ರಾಂಶಬಳಸುವ ಬಗ್ಗೆ ಸಾಮರ್ಥ್ಯದ ವಿವರ) | | | | | | |

ಈ ಮೇಲ್ಕಂಡ ಎಲ್ಲಾ ವಿವರಗಳು ಸತ್ಯವೆಂದು ಪ್ರಮಾಣೀಕರಿಸುತ್ತೇನೆ. ಸತ್ಯವಲ್ಲವೆಂದು ತಿಳಿದುಬಂದಲ್ಲಿ ನನ್ನ ಅರ್ಜಿಯನ್ನು ತಿರಸ್ಕರಿಸಬಹುದು. ನನ್ನ ವಿರುದ್ಧ ಸಿವಿಲ್/ಕ್ರಿಮಿನಲ್ ಮೊಕದ್ದಮೆ ಹೂಡಬಹುದು.

ಸ್ಥಳ:

ದಿನಾಂಕ:

ಪಿ.ಆರ್. 237 ಅರ್ಜಿದಾರನ/ಳ ಸಹಿ

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ವಿಜಾಪೂರ**

**ಅಧಿಸೂಚನೆ**

**ಕ್ರಮಾಂಕ: ಕಂವಿ/ಸಿಬ್ಬಂದಿ/4/ವಿವ–336/08–09 ವಿಜಾಪೂರ, ದಿನಾಂಕ: 28ನೇ ಫೆಬ್ರವರಿ 2009**

**ವಿಷಯ:–** ವಿಜಾಪೂರ ಜಿಲ್ಲೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ಭರ್ತಿ ಮಾಡುವ ಕುರಿತು–

**ಉಲ್ಲೇಖ:–** 1) ಸರ್ಕಾರದ ಅಧಿಸೂಚನೆ ಕ್ರ: ಆರ್‌ಡಿ/299/ಬಿಎಸ್‌ಸಿ/2006 ದಿನಾಂಕ 3/2/2009.

2) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರ ಅ.ಸ ಪತ್ರ ಕಂಇ/299/ಬಿಎಸ್‌ಸಿ/ 2006 ದಿನಾಂಕ 4/2/2009 ಹಾಗೂ 26/2/2009.

ಮೇಲ್ಕಂಡ ಉಲ್ಲೇಖ (1) ರಲ್ಲಿಯ ಅಧಿಸೂಚನೆಯನ್ವಯ ಹಾಗೂ ಉಲ್ಲೇಖ (2) ರಲ್ಲಿಯ ಸರ್ಕಾರದ ಪತ್ರದ ಮೇರೆಗೆ ವಿಜಾಪೂರ ಜಿಲ್ಲೆಯಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿಪಡಿಸಿದ ಅರ್ಜಿಯಲ್ಲಿ ಜಾಗರೂಕತೆಯಿಂದ ಭರ್ತಿ ಮಾಡಿ ದಿನಾಂಕ 30/3/2009 ರ ಸಂಜೆ 5–00 ಗಂಟೆಯೊಳಗೆ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ 30/03/2009 ಸಾಯಂಕಾಲ 5–00 ಗಂಟೆ**

**ಖಾಲಿ ಇರುವ ಹುದ್ದೆಗಳ ವರ್ಗೀಕರಣ**

| ಮೀಸಲಾತಿ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಅಂಗವಿಕಲರು | ಯೋಜನಾ ನಿರಾಶ್ರಿತರು | ಕನ್ನಡ ಮಾಧ್ಯಮ | ಒಟ್ಟು |
|---|---|---|---|---|---|---|---|---|
| ಪ.ಜಾ | 02 | 03 | 03 | 01 | 01 | –– | –– | 10 |
| ಪ.ಪಂ | 01 | 01 | –– | –– | –– | –– | –– | 02 |
| ಪ್ರವರ್ಗ–1 | 01 | 01 | 01 | –– | –– | –– | –– | 03 |
| ಪ್ರ.ವರ್ಗ–2(ಎ) | 02 | 03 | 03 | –– | 01 | –– | –– | 09 |
| ಪ್ರ.ವರ್ಗ–2(ಬಿ) | 01 | 01 | –– | –– | –– | –– | –– | 02 |

| ಮೀಸಲಾತಿ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಅಂಗವಿಕಲರು | ಯೋಜನಾ ನಿರಾಶ್ರಿತರು | ಕನ್ನಡ ಮಾಧ್ಯಮ | ಒಟ್ಟು |
|---|---|---|---|---|---|---|---|---|
| ಪ್ರ.ವರ್ಗ–3(ಎ) | 01 | 01 | –– | –– | –– | –– | –– | 02 |
| ಪ್ರ.ವರ್ಗ–3 (ಬಿ) | 01 | 01 | –– | –– | –– | –– | –– | 02 |
| ಸಾಮಾನ್ಯ | 06 | 09 | 08 | 03 | 02 | 01 | 01 | 30 |
| **ಒಟ್ಟು** | **15** | **20** | **15** | **04** | **04** | **01** | **01** | **60** |

ಅಂಗವಿಕಲರಿಗೆ ಮೀಸಲಿದ್ದ ಹುದ್ದೆಗಳಿಗೆ ಕುಷ್ಠರೋಗದಿಂದ ಗುಣಮುಖರಾದವರು, ಶ್ರವಣದೋಷವುಳ್ಳವರು ಹಾಗೂ ಮಾನಸಿಕ ಅಸ್ವಸ್ಥವುಳ್ಳವರು ಮಾತ್ರ ಅರ್ಜಿ ಸಲ್ಲಿಸಬಹುದು.

**ವಿದ್ಯಾರ್ಹತೆ :–**

1) ಪಿಯುಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಪಾಸಾಗಿರತಕ್ಕದ್ದು.

**ವಯೋಮಿತಿ :–**

ಕನಿಷ್ಠ ವಯೋಮಿತಿ : 18 ವರ್ಷ

ಗರಿಷ್ಠ ವಯೋಮಿತಿ : ಸಾಮಾನ್ಯ ವರ್ಗ : 35 ವರ್ಷ

2ಎ/2ಬಿ/3ಎ/3ಬಿ : 38 ವರ್ಷ

ಪ.ಜಾ./ಪ.ಪಂ/ಪ್ರ.ವರ್ಗ–1 : 40 ವರ್ಷ

ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರನ್ವಯ ವಯೋಮಿತಿಯಲ್ಲಿ ಸಡಿಲಿಕೆಯುಂಟು.

**ವೇತನ ಶ್ರೇಣಿ :–**

ರೂ.5800–100–6000–125–6500–150–7100–175–7800–200–8600–225–9500–250–10500 ಮತ್ತು ಇತರೆ ಭತ್ಯೆಗಳು

**ಆಯ್ಕೆ ವಿಧಾನ :–**

ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಹಾಗೂ ರೋಸ್ಟರ್ ಪಾಲಿಸಿ ಮೆರಿಟ್ ಪಟ್ಟಿ ತಯಾರಿಸಿ ಆಯ್ಕೆ ಮಾಡಲಾಗುವುದು.

**ಪರಿವೀಕ್ಷಣಾ ಅವಧಿ :–**

ಆಯ್ಕೆಯಾದ ಅಭ್ಯರ್ಥಿಗಳನ್ನು ನೇಮಕಾತಿ ನಿಯಮಗಳಂತೆ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿ ಇಡಲಾಗುವುದು. ಈ ಅವಧಿಯಲ್ಲಿ 6 ತಿಂಗಳ ಅವಧಿ ಮೀರದಂತೆ ತರಬೇತಿ ನೀಡಲಾಗುವುದು.

**ಅರ್ಜಿ ಸಲ್ಲಿಸುವ ವಿಧಾನ :–**

ನಿಗದಿತ ನಮೂನೆಯ ಅರ್ಜಿಯನ್ನು ಜಿಲ್ಲಾಧಿಕಾರಿಗಳು ವಿಜಾಪೂರ, ತಹಶೀಲ್ದಾರ ವಿಜಾಪೂರ, ಬ.ಬಾಗೇವಾಡಿ, ಮುದ್ದೇಬಿಹಾಳ, ಇಂಡಿ, ಸಿಂದಗಿ ಇವರ ಕಛೇರಿಯಲ್ಲಿ ರೂ 10.00 ಸಂದಾಯಿಸಿ ದಿನಾಂಕ 09/03/2009 ನಂತರ ಪಡೆಯಬಹುದಾಗಿದೆ. ಹೀಗೆ ಪಡೆದ ಅರ್ಜಿಗಳನ್ನು ಮಾತ್ರ ಪರಿಗಣಿಸಲಾಗುವುದು. ಈ ಅರ್ಜಿಗೆ ಪಿನ್ /ಸ್ಟ್ಯಾಪಲ್ ಮಾಡತಕ್ಕದ್ದಲ್ಲ.

**ಪ್ರಾಮುಖ್ಯವಾದ ಸೂಚನೆಗಳು:–**

**ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳ ಒಂದೊಂದು ಛಾಯಾ (ಫೋಟೋ)ಪ್ರತಿಗಳನ್ನು ಸ್ವ–ದೃಢೀಕರಿಸಿ ಅರ್ಜಿ ಸಂಖ್ಯೆಯನ್ನು ನಮೂದಿಸಿ ಒಂದೇ ಲಕೋಟೆಯಲ್ಲಿ ಪ್ರತ್ಯೇಕವಾಗಿ ಸಲ್ಲಿಸತಕ್ಕದ್ದು.**

1) ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ ಅಂಕಪಟ್ಟಿಗಳು ಹಾಗೂ ಪ್ರಮಾಣ ಪತ್ರಗಳು
2) ಜನ್ಮದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆ ಪ್ರಮಾಣ ಪತ್ರ/ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ
3) ಸೈನಿಕ ಸೇವೆಯಿಂದ ಬಿಡುಗಡೆಯಾದ/ಮುಕ್ತಿಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕರ ಮೀಸಲಾತಿ ಕೋರಿದ್ದಲ್ಲಿ)
4) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರ.ವರ್ಗ–1, ಪ್ರ.ವರ್ಗ–2ಎ, ಪ್ರ.ವರ್ಗ–2ಬಿ, ಪ್ರ.ವರ್ಗ–3ಎ, ಪ್ರ.ವರ್ಗ 3ಬಿ ಗಳ ಇತ್ತೀಚಿಗೆ ಪಡೆದ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ)
5) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ ಮೀಸಲಾತಿ ಕೋರಿದ್ದಲ್ಲಿ
6) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

7) ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
8) ಯೋಜನೆಗಳಿಂದ ನಿರಾಶ್ರಿತರಾದ ಅಭ್ಯರ್ಥಿಯ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
9) ಕಾಲೇಜಿನ ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ ಹಾಗೂ ಸ್ಥಳೀಯ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ 6 ತಿಂಗಳ ಈಚೆಗಿನ 2 ನಡತೆ ಪ್ರಮಾಣ ಪತ್ರ
10) ಅಭ್ಯರ್ಥಿಗಳು ಈ ಕೆಳಗೆ ನಿಗದಿಪಡಿಸಿದ ಫೀಯನ್ನು **"ಜಿಲ್ಲಾಧಿಕಾರಿಗಳು ವಿಜಾಪೂರ"** ಇವರ ಹೆಸರಿನಲ್ಲಿ ವಿಜಾಪೂರದಲ್ಲಿ ಸಂದಾಯವಾಗುವ ಡಿಮಾಂಡ್ ಡ್ರಾಫ್ಟ್ ಪಡೆದು ಅರ್ಜಿಯೊಂದಿಗೆ ಅದರ ಹಿಂದೆ ಅರ್ಜಿ ಸಂಖ್ಯೆ ಮತ್ತು ವಿಳಾಸ ಬರೆದು ಸಲ್ಲಿಸತಕ್ಕದ್ದು.
   1) ಇತರೆ ಅಭ್ಯರ್ಥಿ : ರೂ. 50–00 (ರೂ. ಐವತ್ತು ಮಾತ್ರ)
   2) ಪ.ಜಾ/ಪ.ಪಂ/ಪ್ರವರ್ಗ–1 : ಫೀ ಇರುವುದಿಲ್ಲ.
   ಅಂಗವಿಕಲ/ಮಾಜಿ ಸೈನಿಕರು
   ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂತಿರುಗಿಸಲಾಗುವುದಿಲ್ಲ.

**ಇತರೆ ಸೂಚನೆಗಳು:–**

1) ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ಮೇಲಾಧಿಕಾರಿಗಳಿಂದ ಪಡೆದ ದೃಢೀಕರಣ ಹಾಗೂ ಅನುಮತಿ ಪ್ರಮಾಣ ಪತ್ರವನ್ನು ನೀಡತಕ್ಕದ್ದು.
2) ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವೆಂದು ಘೋಷಿಸಲ್ಪಟ್ಟರೆ ಅದರ ಮಾರನೇ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
3) ಅಭ್ಯರ್ಥಿಯ ಹೆಸರು ಅಂತಿಮ ನೇಮಕಾತಿ ಪಟ್ಟಿಯಲ್ಲಿ ಬಂದಿದೆ ಎಂಬುದರ ಆಧಾರದ ಮೇಲೆ ಅಭ್ಯರ್ಥಿಗೆ ನೇಮಕಾತಿಯ ಯಾವುದೇ ಹಕ್ಕು ದೊರೆಯುವುದಿಲ್ಲ.
4) ಆಯ್ಕೆಯ ಸಂಬಂಧವಾಗಿ ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರ ನಡೆಸಲು ಆಸ್ಪದ ಇರುವುದಿಲ್ಲ.
5) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.

ಅರ್ಜಿಗಳನ್ನು **"ಜಿಲ್ಲಾಧಿಕಾರಿಗಳು ವಿಜಾಪೂರ"** ಇವರ ಹೆಸರಿನಲ್ಲಿ ಸಲ್ಲಿಸತಕ್ಕದ್ದು. ಲಕೋಟೆಯ ಮೇಲೆ **"ಗ್ರಾಮ ಲೆಕ್ಕಾಧಿಕಾರಿಗಳ ಹುದ್ದೆ"** ಗೆ ಅರ್ಜಿ ಅಂತಾ ನಮೂದಿಸತಕ್ಕದ್ದು.

ಕೊನೆಯ ದಿನಾಂಕದ ನಂತರ ಸ್ವೀಕರಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸುವುದಿಲ್ಲ.

ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು
ಪಿ.ಆರ್. 247 ಗ್ರಾಮ ಲೆಕ್ಕಾಧಿಕಾರಿಗಳ ನೇಮಕಾತಿ ಪ್ರಾಧಿಕಾರ, ವಿಜಾಪೂರ

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಉತ್ತರ ಕನ್ನಡ, ಕಾರವಾರ – 581 301

### ಅಧಿಸೂಚನೆ

**ಕಂಶಾ/ಸಿಬ್ಬಂದಿ (2)/ವಿವ– 115/2008–09, ದಿನಾಂಕ : 28ನೇ ಫೆಬ್ರವರಿ 2009.**

ಸರಕಾರದ ಕಂದಾಯ ಇಲಾಖೆ ಅರೆ ಸರಕಾರಿ ಪತ್ರ ಸಂಖ್ಯೆ:ಕಂಇ/299/ಬಿಎಸಿ/2006 ದಿನಾಂಕ: 26.02.2009 ರನ್ವಯ ಉತ್ತರ ಕನ್ನಡ ಜಿಲ್ಲೆಯ ಕಂದಾಯ ಇಲಾಖೆ ಅಧೀನದಲ್ಲಿ ಬರುವ ಕಚೇರಿಗಳಲ್ಲಿ ಹಾಗೂ ಭೂಮಿ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸಲು ಖಾಲಿ ಇರುವ 71 ಗ್ರಾಮ ಲೆಕ್ಕಿಗ ಹುದ್ದೆಗಳಿಗೆ, ಗ್ರಾಮಲೆಕ್ಕಿಗರ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ರೋಸ್ಟರ್ ಕಮ್ ಮೆರಿಟ್ ಆಧಾರದ ಮೇಲೆ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲಾಗಿದೆ.

**I) ಹುದ್ದೆಗಳ ವಿವರ ಮತ್ತು ಪ್ರವರ್ಗ**

| ರಿಕ್ತ ಸ್ಥಾನಗಳ ಮೀಸಲಾತಿ ಮತ್ತು ಸಮತಳ ಮೀಸಲಾತಿಯ ಶೇಕಡಾವಾರು ಪ್ರಮಾಣ | | | | | | | | |
|---|---|---|---|---|---|---|---|---|
| ಮೀಸಲಾತಿ | ಸಮತಳ ಮೀಸಲಾತಿ | | | | | | | |
| | ಮ.ಅ. | ಗ್ರಾ.ಅ. | ಅಂ.ವಿ. | ಮಾ.ಸೈ. | ಯೋ.ಅ. | ಕ.ಮಾ.ಅ. | ಸಾಮಾನ್ಯ | ಒಟ್ಟು |
| ಪ.ಜಾ. | 3 | 3 | 1 | 1 | – | – | 3 | 11 |
| ಪ.ಪಂ. | 1 | 1 | – | – | – | – | 1 | 3 |
| ಪ್ರವರ್ಗ I | 1 | 1 | – | – | – | – | 1 | 3 |
| ಪ್ರವರ್ಗ IIಎ | 3 | 3 | 1 | 1 | – | – | 3 | 11 |
| ಪ್ರವರ್ಗ IIಬಿ | 1 | 1 | – | – | – | – | 1 | 3 |
| ಪ್ರವರ್ಗ IIIಎ | 1 | – | – | – | – | – | 1 | 2 |
| ಪ್ರವರ್ಗ IIIಬಿ | 1 | 1 | – | – | – | – | 1 | 3 |
| ಸಾಮಾನ್ಯ | 11 | 9 | 2 | 3 | 1 | 2 | 7 | 35 |
| **ಒಟ್ಟು** | **22** | **19** | **4** | **5** | **1** | **2** | **18** | **71** |

ಪ್ರಕಟಿಸಿರುವ ಹುದ್ದೆಗಳ ಸಂಖ್ಯೆಗಳನ್ನು ಹೆಚ್ಚು ಅಥವಾ ಕಡಿಮೆ ಮಾಡುವ ಅಧಿಕಾರವನ್ನು ಆಯ್ಕೆ ಪ್ರಾಧಿಕಾರವು ಕಾಯ್ದಿರಿಸಿಕೊಂಡಿರುತ್ತದೆ.

ಈ ಮೇಲಿನ ಹುದ್ದೆಗಳಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ ಹುದ್ದೆಗಳನ್ನು ಹೊರತು ಪಡಿಸಿ ಉಳಿದ ಹುದ್ದೆಗಳಿಗೆ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಸರಕಾರದ ಆದೇಶ ಸಂಖ್ಯೆ.ಸಿಆಸುಇ/97/ಸೆನೆನಿ/2002 ದಿನಾಂಕ : 22–11–2002 ರನ್ವಯ ಭರ್ತಿ ಮಾಡಲು ಕ್ರಮ ಜರುಗಿಸಲಾಗುವುದು.

ಇಬ್ಬರು ಅಥವಾ ಹೆಚ್ಚು ಅಭ್ಯರ್ಥಿಗಳು ಸಮಾನ ಅಂಕಗಳನ್ನು ಗಳಿಸಿದರೆ ಅರ್ಹತೆಯನ್ನು ವಯಸ್ಸಿನಲ್ಲಿ ಹಿರಿಯರಾದವರನ್ನು ಅರ್ಹತಾ ಪಟ್ಟಿಯಲ್ಲಿ ಹಿರಿಯರೆಂದು ತೋರಿಸಲಾಗುವುದು.

**II) ವಯೋಮಿತಿ (ಅರ್ಜಿಸಲ್ಲಿಸುವ ಕೊನೆಯ ದಿನಾಂಕದಂದು)**

a) ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ ಹಾಗೂ ಪ್ರವರ್ಗ I ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಗರಿಷ್ಠ ವಯೋಮಿತಿ 18 ರಿಂದ 40 ವರ್ಷ

b) ಪ್ರವರ್ಗ IIಎ, IIಬಿ, IIIಎ ಮತ್ತು IIIಬಿ ಅಭ್ಯರ್ಥಿಗಳಿಗೆ ಗರಿಷ್ಠ ವಯೋಮಿತಿ 18 ರಿಂದ 38 ವರ್ಷ.

c) ಸಾಮಾನ್ಯ ಅಭ್ಯರ್ಥಿಗಳಿಗೆ ಗರಿಷ್ಠ ವಯೋಮಿತಿ 18 ರಿಂದ 35 ವರ್ಷ.

**III) ವಿದ್ಯಾರ್ಹತೆ** :

ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**IV) ವೇತನ ಶ್ರೇಣಿ** :

ರೂ.5800–100–6000–125–6500–150–7100–175–7800–200–8600–225–9500–250–10500

**V) ಗ್ರಾಮೀಣ ಮೀಸಲಾತಿ** :

ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 ಪ್ರವರ್ಗ–2ಎ, 2ಬಿ, 3ಎ,3ಬಿ ಸೇರಿದ ಅಭ್ಯರ್ಥಿಗಳು ನಮೂನೆ–2 ರಲ್ಲಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಹಾಗೂ ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–1 ರಲ್ಲಿ (Non-Creamy Layer) ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದು ಕೊಂಡಿರತಕ್ಕದ್ದು.

**VI) ಮಾಜಿ ಸೈನಿಕ** :

ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಸೈನ್ಯ ನಿಯೋಜನೆ, ಸೈನ್ಯದಿಂದ ತೆಗೆದು ಹಾಕಿದ ಹಾಗೂ ಸ್ವಯಂ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ ಅವರು ಸೇವೆ ಸಲ್ಲಿಸಿದ ಸೇವಾ ಅವಧಿ ಜೊತೆ ಹೆಚ್ಚುವರಿ ಮೂರು ವರ್ಷಗಳ ರಿಯಾಯಿತಿಗಳನ್ನು ನೀಡಲಾಗುವುದು. ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

**VII) ಯೋಜನಾ ನಿರಾಶ್ರಿತರು** :

ಯೋಜನಾ ನಿರಾಶ್ರಿತ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ.ಡಿಪಿಎಆರ್/ 23/ಎಸ್‌ಆರ್‌ಆರ್/99, ದಿನಾಂಕ : 23–11–2000 ರನ್ವಯ ಸರ್ಕಾರದ ಸುತ್ತೋಲೆ ಸಂಖ್ಯೆ.ಸಿಆಸುಇ–44/ಸೆನೆನಿ/ 2001, ದಿನಾಂಕ : 27–07–2001 ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

**VIII) ಕನ್ನಡ ಮಾಧ್ಯಮ** :

ಕನ್ನಡ ಮಾಧ್ಯಮದ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

**IX) ಜಾತಿ ಮೀಸಲಾತಿ ಪ್ರಮಾಣ ಪತ್ರ** :

ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಕಂಡ ನಮೂನೆಗಳಲ್ಲಿ ಸಲ್ಲಿಸುವುದು.

ಅ) ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ–ಡಿ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

ಆ) ಪ್ರವರ್ಗ–1 ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ–ಇ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

ಇ) ಪ್ರವರ್ಗ–2ಎ, 2ಬಿ, 3ಎ, 3ಬಿ ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ (ನಮೂನೆ–ಎಫ್) ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. (ಈ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಒಂದು ವರ್ಷಕ್ಕಿಂತ ಹಳೆಯದಾಗಿರಬಾರದು)

**X) ಲಗತ್ತುಗಳು** :

ಇತ್ತೀಚಿನ ಭಾವ ಚಿತ್ರದೊಂದಿಗೆ ಭರ್ತಿ ಮಾಡಿದ ಅರ್ಜಿಯ ಜೊತೆಗೆ ಈ ಕೆಳಗಿನ ದೃಢೀಕೃತ ದಾಖಲೆಗಳನ್ನು ಸಲ್ಲಿಸತಕ್ಕದ್ದು.

1. ಜನ್ಮ ದಿನಾಂಕ ದೃಢೀಕರಿಸಲು ಎಸ್.ಎಸ್.ಎಲ್.ಸಿ/ ವರ್ಗಾವಣೆ ಪ್ರಮಾಣ ಪತ್ರ.
2. ಸರ್ಕಾರಿ ಇಲಾಖೆಯಲ್ಲಿ/ ರಾಜ್ಯ ಸರ್ಕಾರದ/ ಕೇಂದ್ರ ಸರ್ಕಾರದ/ ಸರ್ಕಾರದ ಯಾವುದೇ ಪ್ರಾಧಿಕಾರದಲ್ಲಿ/ ರಾಜ್ಯ ಅಥವಾ ಕೇಂದ್ರ ಸರ್ಕಾರದ ಸಾರ್ವಜನಿಕ ಸ್ವಾಮ್ಯದ ಕಂಪನಿಗಳಲ್ಲಿ ಪ್ರಸ್ತುತ ಉದ್ಯೋಗಿಯಾಗಿದ್ದಲ್ಲಿ ಅಂತಹವರು ಇಲಾಖಾ ವತಿಯಿಂದ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಇಚ್ಛಾ ಅನುಮತಿ ಪತ್ರ.
3. ತಹಶೀಲ್ದಾರರಿಂದ ಪಡೆದ ಜಾತಿ ಪ್ರಮಾಣ ಪತ್ರದ ದೃಢೀಕೃತ ಪ್ರತಿ.
4. ಯೋಜನಾ ನಿರಾಶಿತ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರರಿಂದ ಪಡೆದ ಪ್ರಮಾಣ ಪತ್ರದ ಪ್ರತಿ.
5. ಸೈನಿಕ ಸೇವೆಯಿಂದ ಬಿಡುಗಡೆಯಾದ/ ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)
6. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿರಬೇಕು.
7. ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿಟ್ಟುಕೊಂಡಿರತಕ್ಕದ್ದು.
8. ವಿದ್ಯಾರ್ಹತೆಯ ಬಗ್ಗೆ ಪಿ.ಯು.ಸಿ ದ್ವಿತೀಯ ವರ್ಷದ ಅಂಕಪಟ್ಟಿ.
9. 9" X 4" ಅಳತೆಯ ಸ್ವ ವಿಳಾಸ ಇರುವ ಲಕೋಟೆ ಲಗತ್ತಿಸುವುದು.

| | |
|---|---|
| **ಅರ್ಜಿ ಕರೆಯಲು ನಿಗದಿಪಡಿಸಿದ ದಿನಾಂಕ** | **28–02–2009** |
| **ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ** | **20–03–2009** |
| **ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸುವ ದಿನಾಂಕ** | **04–04–2009** |
| **ಅಂತಿಮ ಪಟ್ಟಿ ಪ್ರಕಟಿಸುವ ದಿನಾಂಕ** | **06–04–2009** |

1. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕ ಸಾರ್ವಜನಿಕ ರಜಾ ದಿನವೆಂದು ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ಕೆಲಸದ ದಿನ ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನವಾಗಿರುತ್ತದೆ.
2. ಅಭ್ಯರ್ಥಿಗಳು ನಿಗದಿತ ನಮೂನೆಗಳನ್ನು ಜಿಲ್ಲಾಧಿಕಾರಿ ಕಚೇರಿ/ ಸಹಾಯಕ ಕಮೀಷನರ್ ಕಚೇರಿ ಹಾಗೂ ಆಯಾ ತಾಲ್ಲೂಕಿನ ತಹಶೀಲ್ದಾರ ಕಚೇರಿಯಿಂದ ಕಚೇರಿ ವೇಳೆಯಲ್ಲಿ ಅಥವಾ ವೆಬ್ ಸೈಟ್ ಸಂಖ್ಯೆ.**http://uttarakannada.nic.in** ದಿಂದ ಪಡೆದು ಅಗತ್ಯವಿರುವ ದಾಖಲೆಗಳ ದೃಢೀಕೃತ ಪ್ರಮಾಣಪತ್ರದೊಂದಿಗೆ ಜಿಲ್ಲಾಧಿಕಾರಿ ಹಾಗೂ ಅಧ್ಯಕ್ಷರು, ಗ್ರಾಮ ಲೆಕ್ಕಾಧಿಕಾರಿಗಳ ವೃಂದ ಮತ್ತು ನೇಮಕಾತಿ ಪ್ರಾಧಿಕಾರ, ಉತ್ತರ ಕನ್ನಡ, ಕಾರವಾರ ಈ ವಿಳಾಸಕ್ಕೆ ದಿನಾಂಕ : 20–03–2009 ರ ಸಂಜೆ 5–00 ಗಂಟೆ ಒಳಗೆ ತಲುಪುವಂತೆ ಸಲ್ಲಿಸುವುದು.

ಜಿಲ್ಲಾಧಿಕಾರಿ, ಹಾಗೂ ಅಧ್ಯಕ್ಷರು,
ಗ್ರಾಮ ಲೆಕ್ಕಾಧಿಕಾರಿಗಳ ವೃಂದ ಮತ್ತು ನೇಮಕಾತಿ ಪ್ರಾಧಿಕಾರ,
ಉತ್ತರ ಕನ್ನಡ, ಕಾರವಾರ.

**ಅರ್ಜಿ ನಮೂನೆ**

ಉತ್ತರ ಕನ್ನಡ ಜಿಲ್ಲೆಯ ಕಂದಾಯ ಇಲಾಖೆ ಅಧೀನದಲ್ಲಿ ಬರುವ ಕ್ಛೇರಿಗಳಲ್ಲಿ ಹಾಗೂ ಭೂಮಿ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸಲು ಖಾಲಿ ಇರುವ ಗ್ರಾಮ ಲೆಕ್ಕಿಗರ ಹುದ್ದೆಗೆ ನೇಮಕಾತಿ ಮಾಡುವ ಬಗ್ಗೆ ಅರ್ಜಿ

| ಪಾಸ್ ಪೋರ್ಟ ಅಳತೆಯ ಇತ್ತೀಚಿನ ಭಾವ ಚಿತ್ರ |
|---|

| **(ಅರ್ಜಿಯನ್ನು ಕನ್ನಡದಲ್ಲಿಯೇ ಭರ್ತಿ ಮಾಡಬೇಕು)** | | | |
|---|---|---|---|
| **ಜಿಲ್ಲಾಧಿಕಾರಿಗಳ ಆದೇಶ ಸಂಖ್ಯೆ.ಕಂಶಾ/ಸಿಬ್ಬಂದಿ/ವಿವ-115/2008-09 ದಿನಾಂಕ : 28-02-2009** | | | |
| 1) | ಅಭ್ಯರ್ಥಿಯ ಹೆಸರು (ಬಿಡಿ ಅಕ್ಷರಗಳಲ್ಲಿ) | : | |
| 2) | ತಂದೆಯ ಹೆಸರು | : | |
| 3) | ಹುಟ್ಟಿದ ದಿನಾಂಕ (ಅಕ್ಷರಗಳಲ್ಲಿ)<br>ಮತ್ತು ವಯಸ್ಸು (ಎಸ್.ಎಸ್.ಎಲ್.ಸಿ ವರ್ಗಾವಣೆ ಪ್ರಮಾಣ<br>ಪತ್ರ ಲಗ್ತಿಸುವುದು. | : | |

| | | | | | |
|---|---|---|---|---|---|
| | (ಅ) ಜನ್ಮ ಸ್ಥಳ | : | | | |
| | (ಆ) ತಾಲೂಕು | : | | | |
| | (ಇ) ಜಿಲ್ಲೆ | : | | | |
| 4) | ಪುರುಷರೇ/ ಮಹಿಳೆಯರೇ | : | | | |
| 5) | ಅ) ಅರ್ಜಿ ವಿಳಾಸ (ಪಿನ್‌ಕೋಡ್ ಸಹಿತ) | : | | | |
| | ಆ) ಖಾಯಂ ವಿಳಾಸ | : | | | |
| 6) | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಕ್ಕೆ ಸೇರಿದವರೇ? (ಜಾತಿ ಪ್ರಮಾಣ ಪತ್ರ ಲಗ್ತಿಸುವುದು) | : | | | |
| 7) | ಹಿಂದುಳಿದ ವರ್ಗಗಳಿಗೆ ಸೇರಿರುವರೇ? ಯಾವ ಗುಂಪಿಗೆ ಸೇರಿರುವರು (ಜಾತಿ/ಆದಾಯ ಪ್ರಮಾಣ ಪತ್ರ ಲಗತ್ತಿಸುವುದು) | : | | | |
| 8) | ಮಾಜಿ ಸೈನಿಕರೇ (ದೃಢೀಕೃತ ಪ್ರಮಾಣ ಪತ್ರ) | : | | | |
| 9) | ಗ್ರಾಮೀಣ ಅಭ್ಯರ್ಥಿಗಳೇ (ದೃಢೀಕೃತ ಪ್ರಮಾಣ ಪತ್ರ) | : | | | |
| 10) | ಯೋಜನಾ ನಿರಾಶ್ರಿತರೇ (ದೃಢೀಕೃತ ಪ್ರಮಾಣ ಪತ್ರ) | : | | | |
| 11) | ಅಂಗವಿಕಲ ಅಭ್ಯರ್ಥಿಗಳೇ (ದೃಢೀಕೃತ ಪ್ರಮಾಣ ಪತ್ರ) | : | | | |
| 12) | ಕನ್ನಡ ಮಾಧ್ಯಮ ಅಭ್ಯರ್ಥಿಗಳೇ (ದೃಢೀಕೃತ ಪ್ರಮಾಣ ಪತ್ರ) | : | | | |
| 13) | **ವಿದ್ಯಾರ್ಹತೆ** | **ತೇರ್ಗಡೆಯಾದ ವರ್ಷ** | | **ಪಡೆದ ಅಂಕಗಳು** | **ದರ್ಜೆ ಶೇಕಡಾವಾರು** |
| | ಪಿ.ಯು.ಸಿ./ತತ್ಸಮಾನ | | | | |

-------------------------------------------------- ಆದ ನಾನು ಮೇಲೆ ತಿಳಿಸಿರುವ ಎಲ್ಲಾ ವಿಷಯಗಳು ಸತ್ಯವಾಗಿರುತ್ತದೆ ಎಂದು ದೃಢೀಕರಿಸುತ್ತೇನೆ.

ಸ್ಥಳ :

ದಿನಾಂಕ : (ಅಭ್ಯರ್ಥಿಯ ಸಹಿ)

**<u>ಸೂಚನೆಗಳು</u>** : ಲಗತ್ತಿಸಿದ ದಾಖಲೆಗಳು

1.

2.

3.

4.

ಪಿ.ಆರ್. 252

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
## ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
## ಮಂಗಳೂರು ವಿಭಾಗ, ಮಂಗಳೂರು
## ಅಲ್ಪಾವಧಿ ಟೆಂಡರ್ ಪ್ರಕಟಣೆ

**ಸಂಖ್ಯೆ:8:ಜಿಎನ್ಎಲ್:ಟಿ.ಎನ್‌ಡಿ(32):2008–09:ಎಇ–1, ಮಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಈ ಕೆಳಕಂಡ ಕೆಲಸಕ್ಕೆ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಅರ್ಹ ದರ್ಜೆಯ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿದ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ದಿನಾಂಕ: 16.3.2009 ರಂದು ಸಂಜೆ:4.00 ಗಂಟೆಯವರೆಗೆ ಟೆಂಡರುಗಳನ್ನು ಸ್ವೀಕರಿಸುವರು.

ಖಾಲಿ ಟೆಂಡರು ಫಾರಂಗಳ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂತಿರುಗಿಸುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ದಿನಾಂಕ: 13.3.2009ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಗುತ್ತಿಗೆದಾರರು ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿ ಹಾಗೂ ಈ ತರಹದ ಕಾಮಗಾರಿಗಳನ್ನು ಕೈಗೊಂಡ ಬಗ್ಗೆ ಅನುಭವ ಪತ್ರವನ್ನು ಸಲ್ಲಿಸತಕ್ಕದ್ದು. KW-2 ಟೆಂಡರ್ Section 3 ರಲ್ಲಿ ಕೇಳಿರುವ Qualification Information ನ್ನು ನಿಗದಿತ ನಮೂನೆಯಲ್ಲಿ ಅರ್ಜಿದಾರರು ಭರ್ತಿ ಮಾಡಿ ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ದಿನಾಂಕ: 13.3.2009ರ ಸಂಜೆ:5.30ರ ತನಕ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ ಠೇವಣಿ (ರೂ.ಗಳಲ್ಲಿ) | ಟೆಂಡರು ಅವಧಿ (ಮಳೆಗಾಲ ಸೇರಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) |
|---|---|---|---|---|---|---|---|
| 1 | ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕಿನ ಹಳೆಯಂಗಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ತರಗತಿ ಕೊಠಡಿ ನಿರ್ಮಾಣ. | 25.00 | 1ನೇ ದರ್ಜೆ | 50,000.00 | 12 ತಿಂಗಳು | ದರವಾರು | 2750.00 |
| 2 | ದಕ್ಷಿಣ ಕನ್ನಡ ಜಿಲ್ಲೆ, ಸುಳ್ಯ ತಾಲ್ಲೂಕಿನ ಬೆಳ್ಳಾರೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ತರಗತಿ ಕೊಠಡಿ ನಿರ್ಮಾಣ. | 25.00 | 1ನೇ ದರ್ಜೆ | 50,000.00 | 12 ತಿಂಗಳು | ದರವಾರು | 2750.00 |

**ಸೂಚನೆಗಳು:–**

1. ಉದ್ದೇಶಿಸಿರುವ ಕಾಮಗಾರಿಯ ಶೇ. 50ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತು ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಗಳಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
2. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
3. ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್ / ಕಾಲ್‌ಡೆಪೋಸಿಟ್, ಡಿ.ಡಿ. ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್‌ಎಸ್.ಸಿ.ಯನ್ನು ಕೆಳಸಹಿದಾರರ ಹೆಸರಿಗೆ ಪ್ಲೆಡ್ಜ್ ಮಾಡಿ) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
4. ಗುತ್ತಿಗೆದಾರರು ಕೆಲಸವನ್ನು ನಿಗದಿತ ಸಮಯದಲ್ಲಿ ಮಾಡಿ ಮುಗಿಸತಕ್ಕದ್ದು, ತಪ್ಪಿದಲ್ಲಿ ನಿಯಮದಂತೆ ದಂಡವನ್ನು ವಿಧಿಸಲಾಗುವುದು.
5. ಕಾಮಗಾರಿಗೆ ಬೇಕಾದ ಸಿಮೆಂಟ್, ಉಕ್ಕು ಮತ್ತು ಇನ್ನಿತರ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಹಾಗೂ ಇದನ್ನು ಸಕ್ಷಮ ಅಧಿಕಾರಿಯವರಿಂದ ಪರೀಕ್ಷೆ ಪಡೆದು ಫಲಿತಾಂಶವು ಐ.ಎಸ್.ಐ. ಗುಣವನ್ನು ಖಚಿತಪಡಿಸಿ ಕೆಲಸಕ್ಕೆ ಉಪಯೋಗಿಸತಕ್ಕದ್ದು. ಈ ಅಂಶವನ್ನು ಗುತ್ತಿಗೆದಾರರು ಟೆಂಡರನ್ನು ಸಲ್ಲಿಸುವಾಗ ಗಮನಿಸುವುದು.
6. ಯಶಸ್ವಿ ಟೆಂಡರುದಾರರು ನಿರ್ವಹಿಸುವ ಕಾಮಗಾರಿಯ ಮೊತ್ತದ ಶೇ.1ರಷ್ಟನ್ನು ಲೇಬರ್ ಸೆಸ್‌ನ್ನಾಗಿ ಸರಕಾರಿ ಆದೇಶ ಸಂ. ಯಲ್‌ಡಿ 3:ಎಲ್ಇಡಿ 2006:ಬೆಂಗಳೂರು: ದಿನಾಂಕ: 18.1.2007ರಂತೆ ಕಡಿತಗೊಳಿಸಲಾಗುವುದು.
7. ಕೆಲಸದ ಕುರಿತಾದ ಯಾವುದೇ ವಿವರಗಳನ್ನು ಕಛೇರಿಯ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ ಇಲಾಖೆಯ ವೆಬ್‌ಸೈಟ್ "htpp://www.kpwd.gov.in" ನಲ್ಲಿ ಸಂಪರ್ಕಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

ಪಿ.ಆರ್. 241

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು – 83.**

**ಸಂಕ್ಷಿಪ್ತ ಟೆಂಡರು ಪ್ರಕಟಣೆ**

**ಸಂಖ್ಯೆ: ಎ1–ಬಬಪಾ–ಫೀಡ್–ಸಿಆರ್–3/2008–2009, ದಿನಾಂಕ: 28ನೇ ಫೆಬ್ರವರಿ 2009**

ಕೆಳಗೆ ನಮೂದಿಸಿರುವಂತೆ ವಿವಿಧ ಸಾಮಗ್ರಿಗಳಿಗೆ ಈ ಕಛೇರಿಯಲ್ಲಿ ನೊಂದಾಯಿಸಿರುವ ಸರಬರಾಜುದಾರರಿಂದ 2009–10ನೇ ಸಾಲಿಗೆ ಟೆಂಡರ್ ಕರೆಯಲಾಗಿದೆ.

**ಷೆಡ್ಯೂಲ್**

| ಯೂನಿಟ್ ಸಂಖ್ಯೆ | ವಿವರಗಳು | ಟೆಂಡರಿನ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ ಹಣ (ರೂ. ಲಕ್ಷಗಳಲ್ಲಿ) |
|---|---|---|---|
| 7 | ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನ ಘಟಕಗಳಿಗೆ ಫೀನೈಲ್, ಇಟಿಯಾಲ್, ಸೋಪ್, ಬಲ್ಬ್ ಇತ್ಯಾದಿ ಸರಬರಾಜು ಮಾಡುವುದು | 4.00 | 0.40 |

**ಷರತ್ತುಗಳು:–**

1. ಟೆಂಡರು ಫಾರಂನ್ನು ದಿನಾಂಕ : 22–03–2009 ರಿಂದ 24–03–2009 ರವರೆಗೆ ರೂ. 563/–ಗಳನ್ನು (ತೆರಿಗೆಗಳು ಸೇರಿ) ಪಾವತಿಸಿ ಪಡೆಯಬಹುದು.
2. ಟೆಂಡರು ದಿನಾಂಕ: 25–03–2009 ರಂದು 3 ಗಂಟೆಯವರೆಗೆ ಪಡೆದು ಸಂಜೆ 4.00 ಗಂಟೆಗೆ ತೆರೆಯಲಾಗುವುದು.
3. ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯುವುದು.

ಕಾರ್ಯನಿರ್ವಾಹಕ ನಿರ್ದೇಶಕರು
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು

**ZOO AUTHORITY OF KARNATAKA**

**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE**

**BRIEF TENDER NOTIFICATION**

**No.A1-BBP-Feeding-CR-3/2008-09, Date: 28th February 2009**

Sealed tenders are invited from the suppliers who were registered in this office for the works mentioned below for the year 2009-10.

**SCHEDULE**

| Unit No | Particulars of Works | Approximate cost of tender (Rs. In lakhs) | EMD (Rs. In lakhs) |
|---|---|---|---|
| 7 | Supply of phenyl, Iteol-H, soaps, bulbs etc to various facilities in Bannerghatta Biological Park | 4.00 | 0.40 |

**CONDITIONS**

1. Issue of tender forms from **22-03-2009 to 24-03-2009** on payment of Rs.563/- (including tax) during office hours on working days.
2. Submission of Tenders on **25-03-2009** up to 3:00 PM and Opening of Tenders at 4:00PM
3. Other detailed conditions can be had from the above office.

Executive Director,
Bannerghatta Biological Park, Bangalore

P.D. 41

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು – 83.**

**ಅನುಪಯುಕ್ತ ವಸ್ತುಗಳ ಟೆಂಡರ್ ಹಾಗೂ ಹರಾಜು ಮಾರಾಟ ಪ್ರಕಟಣೆ**

**ಸಂಖ್ಯೆ: ಎ1–ಬಬಪಾ–ಅನುಪಯುಕ್ತ ವಸ್ತುಗಳು–ಸಿಆರ್–2/2008–09, ದಿನಾಂಕ: 28ನೇ ಫೆಬ್ರವರಿ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಕಂಡ ವಸ್ತುಗಳನ್ನು **'ಎಲ್ಲಿ ಹೇಗಿವೆಯೋ ಹಾಗೆ ಆಧಾರದ ಮೇಲೆ"** ಟೆಂಡರ್ ಹಾಗೂ ಹರಾಜು ಮಾರಾಟ ಮಾಡಲಾಗುವುದೆಂದು ಈ ಮೂಲಕ ತಿಳಿಸಿದೆ.

ಸದರಿ ಟೆಂಡರಿನಲ್ಲಿ ಭಾಗವಹಿಸುವವರು ಟೆಂಡರು ಅರ್ಜಿಯನ್ನು ರೂ. 100/– ಪಾವತಿಸಿ ದಿನಾಂಕ: **20.03.2009 ರಿಂದ 23.03.2009 ರ ಮಧ್ಯಾಹ್ನ 12.00** ಘಂಟೆಯವರೆಗೆ ಪಡೆಯಬಹುದು. ಮೊಹರು ಮಾಡಿದ ಲಕೋಟೆಯಲ್ಲಿ ದಿನಾಂಕ: **23.03.2009** ರಂದು **ಮಧ್ಯಾಹ್ನ 2.00 ಘಂಟೆ** ಒಳಗಾಗಿ ಈ ಕೆಳ ಸಹಿ ಮಾಡಿರುವವರ ಕಛೇರಿಯಲ್ಲಿ ಸಲ್ಲಿಸಲು ತಿಳಿಸಿದೆ. ಹರಾಜು **23.03.2009** ರಂದು **ಮಧ್ಯಾಹ್ನ 3.00 ಘಂಟೆಗೆ** ನಡೆಯಲಿದ್ದು, ಹರಾಜಿನ ನಂತರ ಟೆಂಡರ್ ತೆರೆಯಲಾಗುವುದು.

**ವಸ್ತುಗಳ ವಿವರ**

| ಕ್ರ.ಸಂ. | ಲಾಟ್ ನಂ. | ವಿವರಗಳು | ಪ್ರಮಾಣ |
|---|---|---|---|
| 1 | 1 | ಐರನ್ ಗೇಟ್ಸ್, ಐರನ್ ಬಕೆಟ್ಸ್, ಐರನ್ ಸ್ಟ್ಯಾಂಡ್, ರೋಲಿಂಗ್ ಸೆಟ್, ಕೊಲಾಪ್ಸಬಲ್ ಗೇಟ್, ಹೈ ಬೀಮ್ ಯೂ ಚಾನಲ್ | 3020 ಕೆ.ಜಿ |
| 2 | 2 | ಓಲ್ಡ್ ಚೈನ್ ಲಿಂಕ್ ಮೆಶ್, ಗೇಟ್ ಪ್ರಿಪೇರ್ಡ್ ವಿತ್ ಐರನ್ ಮೆಶ್, ಕೇಜಸ್ ಪ್ರಿಪೇರ್ಡ್ ವಿತ್ ಐರನ್ ಮೆಶ್. | 525 ಕೆ.ಜಿ |

**ಷರತ್ತುಗಳು: –**

1. ತೋರಿಸಿರುವ ಪ್ರಮಾಣವು ಅಂದಾಜು ಪ್ರಮಾಣವಾಗಿದ್ದು, ಹರಾಜು/ಟೆಂಡರಿನಲ್ಲಿ ಭಾಗವಹಿಸುವವರು ಹರಾಜು ನಿಗದಿಪಡಿಸಿದ ದಿನಕ್ಕಿಂತ ಮೊದಲು ವಸ್ತುಗಳನ್ನು ಪರೀಕ್ಷಿಸಬಹುದು.
2. ಟೆಂಡರ್ ಹಾಗೂ ಹರಾಜಿಗೆ ಪ್ರತ್ಯೇಕ ಇಎಂಡಿ ಕಟ್ಟತಕ್ಕದ್ದು, ಹರಾಜಿನಲ್ಲಿ ಭಾಗವಹಿಸುವವರು ರೂ **5,000/–** (ರೂ. ಐದು ಸಾವಿರ ಮಾತ್ರ) ಹಾಗೂ ಟೆಂಡರ್‌ನಲ್ಲಿ ಭಾಗವಹಿಸುವವರು ರೂ **1,000/–** ( ರೂ. ಒಂದು ಸಾವಿರ ಮಾತ್ರ) ಅನ್ನು ಠೇವಣಿಯಾಗಿ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಟೆಂಡರಿನೊಂದಿಗೆ ಈ ಕೆಳ ಸಹಿದಾರರ ಪದನಾಮದ ಹೆಸರಿನಲ್ಲಿ ಸಲ್ಲಿಸತಕ್ಕದ್ದು.
3. ಟೆಂಡರ್–ಕಂ–ಹರಾಜಿನಲ್ಲಿ ಜಯಶೀಲರಾದ ವ್ಯಕ್ತಿಗಳು ಪೂರ್ಣ ಹಣವನ್ನು (ತೆರಿಗೆ ಸೇರಿ) ಹರಾಜು ಮುಗಿದ ಕೂಡಲೇ ಪಾವತಿ ಮಾಡತಕ್ಕದ್ದು ತಪ್ಪಿದಲ್ಲಿ ಇಎಂಡಿ ಯನ್ನು ಮುಟ್ಟುಗೋಲು ಹಾಕಲಾಗುವುದು.
4. ಬೆಲೆಯನ್ನು ಪ್ರತಿ ಕೆಜಿಗೆ ಫಾರಂನಲ್ಲಿ ನಮೂದಿಸತಕ್ಕದ್ದು
5. ಬಿಡ್ಡನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಎಲ್ಲಾ ಅಧಿಕಾರ ಈ ಕೆಳ ಸಹಿದಾರರಿಗಿದ್ದು ಅವರ ತೀರ್ಮಾನವೆ ಅಂತಿಮ ತೀರ್ಮಾನವಾಗಿರುತ್ತದೆ.
6. ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯುವುದು.

ಕಾರ್ಯನಿರ್ವಾಹಕ ನಿರ್ದೇಶಕರು
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು

**Office of the Executive Director & Conservator of Forests, Bannerghatta Biological Park, Bangalore – 83**

**No.A1/BBP/Scrap Materials/CR-2/2008-09, Dated: 28th February 2009**

**NOTIFICATION FOR TENDER CUM AUCTION OF SCRAP MATERIALS**

It is informed to the general public that the Tender cum Auction of the following materials on as-is-where basis will be **held on 23-03-2009** by the undersigned or the officer authorized. The blank tender forms can be obtained on payment of Rs 100/- from this office from **20-03-2009 to till 12:00 noon of 23-03-2009**. The last date for receipt sealed tenders is up to **2:00 PM on 23-03-2009**. **Auction of the materials will take place on 23-03-2009 at 3:00 PM.** Soon after the auction, the tenders will be opened. The EMD of Rs 5,000/- in form of DD in the name of the Executive Director, Bannerghatta Biological Park, Bangalore-83 to be deposited before participating in the auction. Those who want to participate in the tender have to enclose Rs 1,000/- DD in the name of the Executive Director, Bannerghatta Biological Park, Bangalore-83. Separate tender form should be submitted for each lot.

**The details of the materials:**

| Sl. No | Lot No. | Particulars | App. Qty |
|---|---|---|---|
| 1 | 1 | Iron Gates, Iron Buckets, Iron Stand, Rolling Set, Collapsible Gate, High beam U channels | 3020 Kgs |
| 2 | 2 | Old chain link mesh, Gate prepared with iron mesh, cages prepared with iron mesh | 525 Kgs |

**TERMS AND CONDITIONS**:

1. The quantity shown above is only approximate and the participants are advised to physically verify the quality & quantity of materials before participating. No claim of what so ever will be entertained after the tender/auction.
2. The successful tenderer should deposit full amount plus taxes as applicable immediately after the sale failing which the EMD will be forfeited.
3. Rate should be quoted per kg in the form.
4. Any other conditions can be added before the auction.
5. The Executive Director, Bannerghatta Biological Park, Bangalore-83 has the right to accept or reject the rate received in auction or tender without assigning any reasons and his decision is final.
6. Further clarification if any can be obtained from this office

Executive Director &
P.D. 42 Conservator of Forests,
Bannerghatta Biological Park, Bangalore – 83.

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು – 83.**

**ಸಂಕ್ಷಿಪ್ತ ಟೆಂಡರು ಪ್ರಕಟಣೆ**

**ಸಂಖ್ಯೆ: ಎ1–ಬಬಪಾ–ವಾನಿ–ಸಿಆರ್–4/2008–09, ದಿನಾಂಕ: 28ನೇ ಫೆಬ್ರವರಿ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2009–10 ನೇ ಸಾಲಿಗೆ ಬನ್ನೇರುಘಟ್ಟ ಜೈವಿಕ ಉದ್ಯಾನವನದ ವಾಹನ ನಿಲ್ದಾಣದಲ್ಲಿ ಪ್ರವಾಸಿಗರ ವಾಹನಗಳನ್ನು ನಿಲ್ಲಿಸಲು ಮೃಗಾಲಯ ಪ್ರಾಧಿಕಾರವು ನಿಗದಿಪಡಿಸಿದ ದರದಲ್ಲಿ ವಾಹನ ನಿಲ್ದಾಣದ ನಿರ್ವಹಣೆ ಮತ್ತು ಶುಲ್ಕ ಸಂಗ್ರಹಿಸಲು ಟೆಂಡರುಗಳನ್ನು ಆಹ್ವಾನಿಸಲಾಗಿದೆ.

ಸದರಿ ಟೆಂಡರಿನಲ್ಲಿ ಭಾಗವಹಿಸುವವರು ಟೆಂಡರು ಅರ್ಜಿಯನ್ನು ಮೊಹರು ಮಾಡಿದ ಲಕೋಟೆಯಲ್ಲಿ ದಿನಾಂಕ: **26.03.2009** ರಂದು **ಮಧ್ಯಾಹ್ನ 3.00 ಘಂಟೆ** ಒಳಗಾಗಿ ಈ ಕೆಳ ಸಹಿ ಮಾಡಿರುವವರ ಕಛೇರಿಯಲ್ಲಿ ಸಲ್ಲಿಸಲು ತಿಳಿಸಿದೆ.

**ಷರತ್ತುಗಳು: –**

1. ಟೆಂಡರಿನಲ್ಲಿ ಭಾಗವಹಿಸುವವರು ತಮ್ಮ ವಿಳಾಸ ದಾಖಲೆ ತೋರಿಸಿ ರೂ. 563/–ಗಳನ್ನು (ತೆರಿಗೆಗಳು ಸಹಿತ) ಪಾವತಿಸಿ ಟೆಂಡರು ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ: **23.03.2009 ರಿಂದ 25.03.2009** ರವರೆಗೆ ಪಡೆಯಬಹುದು.
2. ಗುತ್ತಿಗೆದಾರರು ರೂ **1.00 ಲಕ್ಷ** (ರೂ. ಒಂದು ಲಕ್ಷ ಮಾತ್ರ) ಅನ್ನು ಠೇವಣಿಯಾಗಿ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಟೆಂಡರಿನೊಂದಿಗೆ ಈ ಕೆಳ ಸಹಿದಾರರ ಪದನಾಮದ ಹೆಸರಿನಲ್ಲಿ ಸಲ್ಲಿಸತಕ್ಕದ್ದು.
3. ಟೆಂಡರು ದಿನಾಂಕ: **26.03.2009** ರಂದು 3.00 ಗಂಟೆಯವರೆಗೆ ಪಡೆದು **ಸಂಜೆ 4.00** ಗಂಟೆಗೆ ತೆರೆಯಲಾಗುವುದು.
4. ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯುವುದು.

ಕಾರ್ಯನಿರ್ವಾಹಕ ನಿರ್ದೇಶಕರು
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು

**ZOO AUTHORITY OF KARNATAKA**

**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE**

**BRIEF TENDER NOTIFICATION**

**No.A1-BBP-VP-CR-4/2008-09, Date: 28th February 2009**

It is hereby notified for the general information to the public that sealed tenders are invited and will be received by the Executive Director & Conservator of Forests, Bannerghatta Biological Park, Bangalore or any other officer duly authorized by him for “License to operate the Vehicle Parking Stand at Bannerghatta Biological Park for one year” i.e. for 2009-10 **on 26-03-2009**.

**CONDITIONS**

1. The prescribed blank tender documents will be issued by the office of the undersigned from **23-03-2009** to **25-03-2009** on payment of Rs.563/- including taxes on production of address proof, during office hours on working days.

2. The tender should be accompanied with an EMD of Rs. 1.00 lakh (Rupees one lakh only) which will be in the form of DD from nationalized banks and should be in favour of the Executive Director & Conservator of Forests, Bannerghatta Biological Park, Bangalore.
3. The completed tender documents will be received till 3.00 PM on 26-03-2009 and the same will be opened at 4.00 PM on the same day.
4. For further information/clarification, if any, the intending applicants may contact the above mentioned office at office hours.

Executive Director,
Bannerghatta Biological Park, Bangalore

P.D. 43

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು – 83.**

**ಟೆಂಡರು ಪ್ರಕಟಣೆ**

**ಸಂಖ್ಯೆ: ಎ1–ಬಬಪಾ–ಭ.ಸಿ–ಸಿಆರ್–1/2008–09, ದಿನಾಂಕ: 28ನೇ ಫೆಬ್ರವರಿ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2009–10 ನೇ ಸಾಲಿಗೆ ಬನ್ನೇರುಘಟ್ಟ ಜೈವಿಕ ಉದ್ಯಾನವನಕ್ಕೆ ಒಂದು ವರ್ಷ ಅವಧಿಗೆ ಭದ್ರತಾ ಸಿಬ್ಬಂದಿಯವರನ್ನು ಒದಗಿಸುವ ಬಗ್ಗೆ ಸೂಕ್ತ ಭದ್ರತಾ ಸಂಸ್ಥೆಗಳಿಂದ ಟೆಂಡರ್ ಕರೆಯಲಾಗಿದೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ವಿವರಗಳು | ಟೆಂಡರಿನ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇ.ಎಂ.ಡಿ ಹಣ (ರೂ. ಲಕ್ಷಗಳಲ್ಲಿ) |
|---|---|---|---|
| 1 | ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿಗೆ ಭದ್ರತಾ ಸಿಬ್ಬಂದಿಯನ್ನು ಒದಗಿಸುವುದು – 5 ಸಂಖ್ಯೆ | ರೂ 2.40 ಲಕ್ಷ | ರೂ. 25,000/– |

**ಷರತ್ತುಗಳು: –**

1. ಟೆಂಡರಿನಲ್ಲಿ ಭಾಗವಹಿಸುವವರು ತಮ್ಮ ವಿಳಾಸ ದಾಖಲೆ ತೋರಿಸಿ ರೂ. 225/–ಗಳನ್ನು (ತೆರಿಗೆಗಳು ಸಹಿತ) ಪಾವತಿಸಿ ಟೆಂಡರು ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ : **18.03.2009 ರಿಂದ 20.03.2009** ರವರೆಗೆ ಪಡೆಯಬಹುದು.
2. ಗುತ್ತಿಗೆದಾರರು **ಇ.ಎಂ.ಡಿ** ಹಣವನ್ನು ಠೇವಣಿಯಾಗಿ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಟೆಂಡರಿನೊಂದಿಗೆ ಈ ಕೆಳ ಸಹಿದಾರರ ಪದನಾಮದ ಹೆಸರಿನಲ್ಲಿ ಸಲ್ಲಿಸತಕ್ಕದ್ದು.
3. ಟೆಂಡರು ದಿನಾಂಕ: **21.03.2009** ರಂದು 3.00 ಗಂಟೆಯವರೆಗೆ ಪಡೆದು **ಸಂಜೆ 4.00** ಗಂಟೆಗೆ ತೆರೆಯಲಾಗುವುದು.
4. ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯುವುದು.

ಕಾರ್ಯನಿರ್ವಾಹಕ ನಿರ್ದೇಶಕರು
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು

**ZOO AUTHORITY OF KARNATAKA**

**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE**

**TENDER NOTIFICATION**

**No.A1-BBP-S.G-CR-1/2008-09, Date: 28th February 2009**

It is hereby notified for the general information to the public that sealed tenders are invited from the reputed agencies and will be received by the Executive Director & Conservator of Forests, Bannerghatta Biological Park, Bangalore or any other officer duly authorized by him for "Providing Security Personnel for one year" i.e. for 2009-10 **on 21-03-2009** as noted in the schedule below.

**Schedule**

| Sl.No | Particulars | Amount put to tender (Rs. In Lakhs) | EMD to be furnished (in Rupees) |
|---|---|---|---|
| 1 | Providing Security Personnel to Bannerghatta Biological Park, Bangalore – Security Guards – 5 Nos. | Rs. 2.40 lakhs | Rs. 25,000/- |

**Note**

1. The tender forms will be available in the office of the undersigned during the office working hours from **18-03-2009 to 20-03-2009 Up to 12.00 PM** on payment of Rs. 225/- per form including taxes. Other details can be had from the office of the undersigned during the office hours on working days.
2. An EMD which will be in the form of DD from nationalized banks and should be in favour of the Executive Director & Conservator of Forests, Bannerghatta Biological Park, Bangalore
3. The completed tender documents will be received till 3.00 PM on **21-03-2009** and the same will be opened at 4.00 PM on the same day.
4. For further information/clarification, if any, the intending applicants may contact the above mentioned office at office hours.

Executive Director,
Bannerghatta Biological Park, Bangalore

P.D. 44

**ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ,**
**[ಕರ್ನಾಟಕ ಸರ್ಕಾರದ ಒಂದು ಉದ್ಯಮ]**
**#45 ಎ, ನ್ಯೂ ಟಿಂಬರ್ ಯಾರ್ಡ್ ಲೇಔಟ್, ಮೈಸೂರು ರಸ್ತೆ, ಬೆಂಗಳೂರು – 560 026**
**ಟೆಂಡರ್ ಪ್ರಕಟಣೆ**

**ಸಂಖ್ಯೆ:ಕೆಎಸ್ಎಫ್ಐಸಿ/ಟಿಇಸಿ/ಸಿಆರ್/ಟೆಂಡರ್/2008–09, ದಿನಾಂಕ: 5ನೇ ಫೆಬ್ರವರಿ 2009**

ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ, ಟಿಂಬರ್ ಯಾರ್ಡ್ ಲೇಔಟ್, ಬೆಂಗಳೂರು, ಇಲ್ಲಿಗೆ ಕತ್ತರಿಸಿದ ವಿವಿಧ ಜಾತಿಯ ಮರದ ವಿವಿಧ ಅಳತೆಯ ಸೈಜುಗಳು, ಹಲಗೆಗಳು, ಪ್ಲೈವುಡ್, ವಿನಿಯರ್ಸ್, ಲ್ಯಾಮಿನೇಟ್, ಸಿ.ಐ.ಲೆಗ್ಸ್, ಪಿ.ಎಫ್.ರೆಸಿನ್, ವುಡ್ ಪ್ರಿಸರ್ವೆಟಿವ್, ಬರ್ಮಾ ಟೀಕ್ ಮರದ ಬೀಡಿಂಗ್ ಇತ್ಯಾದಿಗಳನ್ನು 2009–10 ನೇ ಸಾಲಿಗೆ ಸರಬರಾಜು ಮಾಡಲು ವ್ಯಾಟ್ ಕಾಯಿದೆಯಡಿ ನೊಂದಾಯಿತ ಹೆಸರಾಂತ ಟಿಂಬರ್ ವ್ಯಾಪಾರಸ್ಥರು/ಸರಬರಾಜುದಾರರು/ ತಯಾರಕರು ಇವರಿಂದ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

| | |
|---|---|
| ಟೆಂಡರ್ ಫಾರಂಗಳನ್ನು ಒದಗಿಸುವ ದಿನಾಂಕ | 07.03.2009 ರಿಂದ |
| ಟೆಂಡರ್ ಫಾರಂಗಳನ್ನು ಒದಗಿಸಲು ಕಡೆಯ ದಿನಾಂಕ | 08.04.2009 ರಂದು ಮಧ್ಯಾಹ್ನ 1.30 ಘಂಟೆವರೆಗೆ. |
| ಟೆಂಡರ್ ಸ್ವೀಕರಿಸಲು ಕಡೆಯ ದಿನಾಂಕ | 08.04.2009 ರಂದು ಮಧ್ಯಾಹ್ನ 3.00 ಘಂಟೆವರೆಗೆ. |
| ಟೆಂಡರ್‌ಗಳನ್ನು ತೆರೆಯುವ ದಿನಾಂಕ | 08.04.2009 ರಂದು ಸಂಜೆ 4.00 ಘಂಟೆಗೆ. |

ಹೆಚ್ಚಿನ ವಿವರಗಳನ್ನು ಮತ್ತು ಟೆಂಡರ್ ಫಾರಂಗಳನ್ನು ಮೇಲಿನ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಪಿ.ಡಿ. 45

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಮತ್ತು ಪ್ರಾದೇಶಿಕ ವ್ಯವಸ್ಥಾಪಕರು

**FORM - I**
**(See Rule - 9)**
**AGRICULTURE DEPARTMENT**
**NOTIFICATION**
**No. AHD 296 AGS 2008, Bangalore, Dated: 20th January 2009**

Smt **"SEEMA VENKATESHRAO SHURPALI,"** Working as Agriculture Officer [Farm Women] in the Agriculture Department office of the Assistant Director, Agriculture, Seed Testing Laboratory, Dharwad is permitted to change her name to **"SEEMA ARVIND SAVANUR".**

By Order and in the name of the Governor of Karnataka
**G.K. GURANI**
Under Secretary to Government,
Agriculture Department.

P.D. 28